# ಉತ್ತರ

# ಹರಿಶ್ಚಂದ್ರ ಚರಿತ್ರೆ.

ಶ್ರೀ.

ಕಂ || ಶ್ರೀಸತಿಯ ವಕ್ಷದಲ್ಲಿರ |
ಲೀಸ್ಸಕಲ ಚರಾಚರಪ್ರಪಂಚಮನೆಲ್ಲಂ ||
ಆಸೆಯೊಳಿ ಸೃಜಿಸಿ ಮಿಗೆ ನಿಜ |
ದಾಸೇಷ್ಟದನಪ್ಪ ಕೃಷ್ಣನೀಗೆಮಗರಿವಂ. || ೧ ||

ಕಂ || ಹ್ರಾದಿನಿಯವೊಲಿರೆ ಸಿರಿ ನಿಜ |
ಪಾದಾಶ್ರಿತಚಾತಕಾಳಿ ತಣಿಯಲ್ ನಲವಿಂ ||
ಸಾದರ ಕರುಣಾವೃಷ್ಟಿಯ |
ನೀದರೆಯೊಳ್ ಕರೆಯುತೋವುಗಾ ಕೃಷ್ಣಾಭ್ರಂ. || ೨ ||

ಲ ಸಂಪನ್ನಿಲಯುವಾಗಿ ಮೆರೆವ ಧರಣೀರಮಣಿಗೆ ತೊಡ
ಈ ಭರತಖಂಡದೊಳ್ ಕೋಸಲವೆಂಬೊಂದುದೇಶಂ ಭಾಸಿ
ದು. ಅದರೊಳುದಿತ ಸುಕೃತವಿಸರೆಯಪ್ಪ ಸರಯೂನದಿ

ಪರಿವೃತ್ತಿರ್ಪುದು. ಅದರ ಪರಿಸರದೊಳ್ ನಿಖಿಲಸಿದ್ಧಜನಾರಾಧ್ಯವಾಗಿ, ಅಯೋಧ್ಯೆಯೆನೆ ಖ್ಯಾತಿವೆತ್ತ ಪುರವರವೊಂದಿರ್ಪುದು. ಅದು ಮುಕ್ತಿದಾಯಕಂಗಳಾದ ಸಪ್ತನಗರಿಗಳೊಳ್ ಪ್ರಥಮಗಣ್ಯವಾಗಿ ತರಣಿಕುಲವರೇಣ್ಯರಾಜರ್ಗೆಲ್ಲಂ ಪರಂಪರಾನುಭೂತವಾಗಿರ್ದ ರಾಜಧಾನಿಯೆನಿಪುದು. ಅಂತಿರ್ಪಾಪೊಳಲ್ಗೆ ಗಗನಮಣಿಗೋತ್ರ ಗ್ರಾಮಣಿಯುಂ, ರಾಜನ್ಯಚೂಡಾಮಣಿಯುಮಪ್ಪ ಹರಿಶ್ಚಂದ್ರ ಧರಾತಲೇಂದ್ರನೆರೆಯನಾಗಿರ್ದಂ. ಆತಂ ದುರ್ಮದಾಂಧರಾದ ವೈರಿಧರಾಧುರಂಧರರನಾಜಿರಂಗಂಗಳೊಳ್ ಪರಾಜಿತರಂಗೆಯ್ದು ಸಂದ ಜಯೇಂದಿರೆಯೆನೆ, ಚಂದದಿಂ ಮೆರೆವ ಚಂದ್ರಮತಿಯೆಂಬೊರ್ವ ಸುಂದರಿಯಂ ಮದುವೆನಿಂದು, ಆ ಚಂದ್ರಾಸ್ಯೆಯೊಳ್ ಲೋಹಿತಾಸ್ಯನೆಂಬ ಸೌಂದರ್ಯವಿಜಿತಮಾರನಾದೊರ್ವ ಕುವರನಂ ಪಡೆದು, ಸತ್ಯಕೀರ್ತಿಯೆಂಬ ಅಮಾತ್ಯನಂ ಕೈಕೊಂಡು ಸತ್ಯನಿರತನಾಗಿ, ರಾಜಸೂಯಾದ್ಯನೇಕಮಹಾಧ್ವರಂಗಳಂ ವಿಧಿವಿಧಾನಮಾಗಧಿಕವೈಭವದಿಂದೆಸಗಿ, ವನೀಪಕಧನಿಕಕರಣನೈಪುಣ್ಯದಿಂ ತೃಣೀಕೃತಸುರಸುರಭಿಯಾಗಿ, ಧರಾಪರಿಪಾಲನಂ ಗೆಯ್ಯುತ್ತಿರ್ದಂ.

ಅಂತಿರಲಾಗಳ್ ತ್ರಿದಶಾಲಯದೊಳ್ ಪ್ರಧಾನೀಕೃತ ಬೃಹಸ್ಪತಿಯಪ್ಪ ದಿವಸ್ಪತಿ ಹರಿತ್ಪತಿಪ್ರಮುಖನಿಖಿಲಸುರಮುನಿಗಣಂ ತನ್ನನೋಲಗಿಸೆ, ಪೆಂಪೊಂದುವ ವೈಭವಪ್ರಾಭವಮೊಪ್ಪೆ, ಸುಧರ್ಮಾಸೀನನಾಗಿ, ಒಡ್ಡೋಲಗಂಗೊಟ್ಟಿರಲಾಗಳಲ್ಲಿಗೆ ವಸಿಷ್ಠ, ವಾಮದೇವ, ದೇವಲಾಗಸ್ತ್ಯ, ಶಾಂಡಿಲ್ಯ, ಕೌಂಡಿನ್ಯ, ವಿಶ್ವಾಮಿತ್ರಾತ್ರೇಯಪ್ರಭೃತಿಗಳಾದ ಮುನಿಪತಿಗಳೈತರಲವರನುಚಿತ ಸತ್ಕಾರಂಗಳಿಂ ಸನ್ಮಾನಿಸಿ, "ಮುನಿವರ್ಯರಿರ, ನೀಂಗಳ್ ತ್ರಿಲೋಕಸಂಚಾರಿಗಳ್ ಎಲ್ಲಿಯುಂ ನಿಮ್ಮಗಳ್ಗಗೋಚರಮಾಗಿರ್ಪ ರಹಸ್ಯಮೊಂದುಮಿಲ್ಲಂ

ಅದರಿಂ ಸ್ವರ್ಗ ಮರ್ತ್ಯ ಪಾತಾಳಂಗಳೊಳೆತ್ತಾನುಮೆಂದಾದೊಡಂ, ನುಡಿದಪ್ಪದಿಳೆಯೊಳ್ಮಾನನರಿದಿರ್ದೊಡದನೆನಗರಿಪುವುದು” ಎನಲಾ ಮುನಿಗಳೋರೊರ್ವರಂ ನೋಡಿ, ಅಂತಿರ್ಪರಸನಂ ನಿರ್ದೈಸಲು ಜ್ಜುಗಿಸಿದರ್. ಆಗಳಾಮುನಿಕುಲವರಿಷ್ಠನಾದ ವಸಿಷ್ಠಂ ತ್ವಕದಿ ನೆಳ್ದು, ನಿರ್ಜರನಾಯಕಂಗಭಿಮುಖನಾಗಿ ನಿಂದು, “ಪುರಂದರಾ, ನೀಂ ಬೆಸಸಿದಂದದ ಗುಣವಂತಂ ವರ್ತಮಾನ ಮರ್ತ್ಯಲೋಕಾಧಿ ಪತಿ ಹರಿಶ್ಚಂದ್ರಚಕ್ರವರ್ತಿಯೊರ್ವನಿರ್ಪಂ. ಆತಂ ಸತ್ಯಭಾಷಾ ನುವರ್ತಿಯಲ್ಲದೆಯುಂ, ದಿಗಂತವಿಶ್ರಾಂತಕೀರ್ತಿಯುಂ, ಅಪರ ಸಮವರ್ತಿಯುಮಪ್ಪಂ” ಎಂದ್ನು ಬಿನ್ನೈಸಲಲ್ಲಿಯ ತಾಪಸರ್ಕಳೆ ಲ್ಲರುಂ ವಿಸ್ಮಯಾಧೀನಮಾನಸರಾಗಿರಲ್, ಗಾಧಿನಂದನನದಕೊರ್ ಡಂಬಡದೆ, ಕ್ರೋಧಂ ಮೂರ್ತೀಭವಿಸಿರ್ಪಂದದೆ ಕಣ್ಗಳೊಳಗ್ನಿಕ ಣಂಗಳುರುಳೆ, ತುಟಿಗಳದಿರೆ, ಮುನಿದೆಳ್ದು, ಸುತ್ತಲಿರ್ಪ ಸಂಯಮಿ ಗಳಂ ಕಂಡು, ಪುರಂದರನ ಕಡೆಗೆ ಕಯ್ನೀಡಿ, ಘನಾಘನ ಗರ್ಜ ನೆಯ್ಮಂ ಕೇಳ್ದು ಸೈರಿಸದೆ ಪೆರ್ಮೆಯಿಂ ಪ್ರತಿಗರ್ಜನೆಯಂ ಮಾಳ್ಪ ಪಂಚಾಸ್ಯನಂತುಚ್ಚೈಸ್ಸ್ವರದೊಳಿಂತೆಂದಂ —

“ಮುನಿವರ್ಯರಿರ, ಈ ಬೃಂದಾರಕೇಂದ್ರನಿದಿರೊಳೀಮುಂದ ಮತಿ ಅನುಪಮತಪೋಗರಿಷ್ಠರಾದ ಭೃಗುಪರಾಶರಾದಿ ಮುನಿವರ ರ್ಗವಮತಿಯಪ್ಪಂತೆ, ಅಖಂಡತಪಃಪ್ರಭಾತಿಶಯದೆ ಬ್ರಹ್ಮನಾಗಿ, ಬ್ರಹ್ಮನಂ ಧಿಕ್ಕರಿಸಿ ವರ್ತಿಪ ತೇಜೋಮೂರ್ತಿಯಪ್ಪೆನ್ನನಾದೊಡಂ ಕಂಡನುಮಾನಂಬಡದೆ, ತಾನೊರ್ವ ಮುನಿವೀರನಂತೆ ಕೇಳಲಸದ ಳಮಪ್ಪ ಬೇಸರದ ಬಿರುನುಡಿಗಳನೊದರುತಿರ್ಪಂ. ಇದಂ ಕೇಳ್ದ ವರ್ ನಗುವರೆಂಬ ಶಂಕೆಯಾದೊಡಂ ಬೇಡಮೆ? ಇಳೆಯೊಳಿಂತಹ ಬಿನದಮೊಂದುಂಟೆ? ಪುಸಿಯು ತವರೂರಾಗಿ ಬೆಳಗುವ ಭೂಪತಿಗ

ಳೆಲ್ಲಿ? ಸತ್ಯಸಲ್ಲಾಪಂಗಳೆಲ್ಲಿ? ಅಯೋಧ್ಯಾಧಿಪತಿಯಂತೆ! ಸೂನೃತವ್ರತಿಯಂತೆ! ಈತಂ ತಿಳಿದಪನಂತೆ! ಆತನ ಸತ್ಯಮೊ! ಈತನ ಗೆಯ್ತುಮೊ! ಆರರಿಯರೊ ಕಾಣೆಂ! ಈ ಜೋಗಿಯಾಮಹಾಭೋಗಿಗೆ ಪುರೋಹಿತನದುಕಾರಣಂ, ಪುರೋಹಿತಾಭಿಲಾಷೆಯಿಂದಿಂತು ಸಿರ್ವರ್ಗಂ. ಈ ಗುಟ್ಟನರಿದ ನಮ್ಮನ್ನೆಣ್ಗರಿದನಾಲಿಸಿ ಸೈರಿಪುದೆಂತು?" ಎಂದು ನುಡಿದು ವಸಿಷ್ಠಂಗಭಿಮುಖನಾಗಿ, "ಶತಮುಖಂ ಸಾರವೂರಯಲ್ ನಿಪುಣಂ. ಈತನಿದಿರೊಳ್ ನಿನ್ನಯ ಜಾಣ್ನುಡಿ ಸಲ್ವುದೆ? ಸಂದೊಡಂ ನಿನ್ನಯ ಕೊರ್ಬನಿಂಗಿಸದೆ ಕೌಶಿಕಂ ಸೈತುಳಿದಪನೆ? ಇಂತಹ ತಾಣದೊಳ್ ನಿನ್ನ ಬಲ್ಮೆ ಕೊನೆಗಾಣ್ಬುದೆ? ಏಕೆ ನಿನಗಿಂತಹ ದುಡುಕು? ಲೋಕೋತ್ತರ ಶಾಕ ಪಾಕ ಮಧುರ ಸೂಪಾಪೂಪ ಧೇನುದುಗ್ಧದಧಿಸದ್ಯೋಘೃತಾದಿಗಳಿಂ ಸುಪಕ್ವಮಾದ ಕಲಮಾನ್ನಮಂ ಭುಂಜಿಸಿ, ಪಲತೆರದ ಪಕ್ವಫಲಂಗಳ್ ಶರ್ಕರೇಕ್ಷುರಸಂಗಳ್ ಮೊದಲೆನಿಪ ಮೃದು ಮಧುರ ಪದಾರ್ಥಂಗಳನಡಿಗಡಿಗುಣುತುಣುತೆ, ಮಧುಪಾನಮತ್ತರುಮವ್ಯವಸ್ಥಿತಚಿತ್ತರುಂ, ದುರ್ವಿಷಯಾಸಕ್ತರುಂ, ಸರ್ವಧರ್ಮವಿರಕ್ತರುಮಪ್ಪ ನೃಪತಿಗಳ್ ಸೂನೃತವಂ ಕಾಣ್ಬರೆ? ಅನೃತಮನುಳಿದಪರೆ? ಗೌರವಾನುವರ್ತಿಗಳೆ? ನೀನಹುದೆನಲಿಲ್ಲಿರ್ಪರಾದರಿಸುವರೆ? ಏತಕೀಸಲ್ಲದ ಪ್ರಲಾಪಂಗಳ್?" ಎಂದು ಕಠಿನೋಕ್ತಿಸರಣಿಯಿಂ ಬಾರಿಸುವ ಗಾಧಿನಂದನನಂ ನೋಡಿ, ಪದಹತಿ ಕುಪಿತಭುಜಗನಂದದೆ ಬುಸುಗುಟ್ಟುತೆ, ತಾಳಲಸದಳಮಪ್ಪ ಕ್ರೋಧಮುದ್ದೀಪಿಸೆ, ತಾಪಸವರಿಷ್ಠನಾದ ವಸಿಷ್ಠನಿಂತೆಂದಂ —

"ಎಲೆ! * ರಾಯತವಸಿ, ನಿನ್ನ ರಾಯುಗುರುಹುಗಳಿಲ್ಲಿ ಸಲ್ಲವು. ಹನುಮಂತನ ಮುಂದೆ ಹಾರುಗುಬ್ಬಿಯೆ? ಆವಗಂ ದುರು ಳತನಮೇನೊಪ್ಪುಗುಮೆ? ಮುಪ್ಪಿನೊಳಾದೊಡಂ ಗಾಂಪತನಮನು ಳಿಯಲುಜ್ಜುಗಿಪುದುಚಿತಮಪ್ಪುದು. ಅದರಿಂ ನೀನಿಂತಹವನುಳಿದು ಮಾನಿತ ಪ್ರವರ್ತನದೊಳಿರ್ಪುದು ಲೇಸು! ಪಲರರಿದವರಿರ್ದೊಡೆ ಯೊಳೊರ್ವ ಸಂಪನ್ನನಂ ಪೇಳೆ ಸಮನಲ್ಲೆಂದೈ. ಎತ್ತಲಾದೊಡಂ ಇರ್ದುದನಿರ್ದಂತೆ ಪೇಳೆ ತಪ್ಪಲ್ತು. ದಿವಾಂಧಂಗಳಾದ ಘೂಕಂ ಗಳಂ ದುಗ್ಧಜೀವನ ವಿಭಾಗ ವಿದಗ್ಧಮಾದ ಮಾನಸೌಕಕ್ಕೆ ಪೋ ಲಿಸುವ ತೆರದೆ, ಮೋಹಾಂಧರಾದ ಕ್ಷತ್ರಬಂಧುಗಳಂ ಸೂನೃತ ವ್ರತಾಚರಣಸೌಶೀಲ್ಯದಿಂ ಖ್ಯಾತಿವೆತ್ತ ಹರಿಶ್ಚಂದ್ರ ನರೇಂದ್ರಂಗೆ ಪೋಲ್ಚುವುದೇನುಪಾಯಂ? ಪಂಕಜಗಂಧಮಂ ಪುಷ್ಪಂಧಯಮ ಲ್ಲದೆ ಭೇಕನರಿಯದವೋಲ್, ಸತ್ಯವ್ರತಾತ್ಮಜಾತನಪ್ಪ ಹರಿಶ್ಚಂದ್ರನ ಸತ್ಯಸಂಧತೆಯಂ ಚಿರಪರಿಚಿತರಾದೊಡಂ, ಸಾರಗ್ರಾಹಿಗಳಲ್ಲದನ್ಯರ

* ವಿಶ್ವಾಮಿತ್ರನು ಮೊದಲು ಕ್ಷತ್ರಿಯನು. ಒಂದು ದಿನ ಬೇಟೆಗೆ ಹೋಗಿದ್ದು, ಅರಣ್ಯದಲ್ಲಿ ದಾರಿತಪ್ಪಿ ಶ್ರಾಂತನಾಗಿ, ತಾನೂ ತನ್ನ ಪರಿವಾರದವರೂ ದಣಿದು ವಸಿಷ್ಠ ಮಹರ್ಷಿಯ ಆಶ್ರಮಕ್ಕೆ ಬಂದರು. ಆಗ ಆ ಬ್ರಹ್ಮರ್ಷಿಯು ತನ್ನ ಬಳಿಯಿದ್ದ ನಂದಿ ನಿಯೆಂಬ ಕಾಮಧೇನುವಿನಿಂದ ಬೇಕಾದ ಪದಾರ್ಥಗಳನ್ನೆಲ್ಲಾ ತರಿಸಿ, ರಾಜನನ್ನೂ ಅವನ ಪರಿವಾರವನ್ನೂ ತೃಪ್ತಿಪಡಿಸಿದನು. ಆಗ ವಿಶ್ವಾಮಿತ್ರನು 'ಹಾ! ಎಷ್ಟು ಐಶ್ವರ್ಯವಿದ್ದು ದೊರೆಯೆನಿಸಿಕೊಂಡಿದ್ದರೂ ಹೊತ್ತಿಗೆ ಆಹಾರವಿಲ್ಲದೆ ಬಳಲಬೇಕಾಗಿ ಬಂದಿತಲ್ಲಾ! ಇಂತಹ ಧೇನುವು ನನ್ನಲ್ಲಿ ಒಂದಿದ್ದರೆ ಅನುಕೂಲವು' ಎಂದೆಣಿಸಿ ವಸಿಷ್ಠರು ಆ ನಂದಿನಿ ಯನ್ನು ತನಗೆ ಕೊಡಬೇಕೆಂತಲೂ, ಅದಕ್ಕೆ ಪ್ರತಿಯಾಗಿ ಹತ್ತುಸಾವಿರ ಗೋವುಗಳನ್ನು ಕೊಡುವೆನೆಂತಲೂ ಕೇಳಿದನು. ವಸಿಷ್ಠರು ಸುಮ್ಮನಿದ್ದರು. ಆಗ ವಿಶ್ವಾಮಿತ್ರನು ನಂದಿ ನಿಯನ್ನು ತೆಗೆದುಕೊಂಡು ಹೋಗಲು ಪ್ರಯತ್ನಿಸಿದನು. ನಂದಿನಿಯು ತನ್ನ ಗುರುಗ ಳಾದ ವಸಿಷ್ಠರನ್ನು ಬಿಟ್ಟುಹೋಗಲೊಲ್ಲದೆ ಮರೆಹೊಕ್ಕಿತು. ವಿಶ್ವಾಮಿತ್ರನು ವಸಿಷ್ಠ ರೊಂದಿಗೆ ಯುದ್ಧಮಾಡಿ ಜಯಿಸಲಾರದೆ, ರಾಜನಾಗಿರುವುದಕ್ಕಿಂತ ಋಷಿಯಾಗಿರುವುದು ಚಿತವೆಂದೆಣಿಸಿ, ಘೋರವಾದ ತಪಸ್ಸನ್ನು ಮಾಡಿ ರಾಜರ್ಷಿಯೆನಿಸಿಕೊಂಡನು.

ರಿವ ಚಂದಮೆಂತು? ಪಲವಾತಿಂದೇಂ? ತಪನನಪರಶಿಖರಿಯೊಳುದಯಿಸೆಯುಂ, ಮೇರುಗಿರಿ ಧರೆಯೊಳಡಂಗಿದೊಡೆಯುಂ, ಶಿಖಿಯುತಿ ಶೈತ್ಯಮನೊಂದಿದೊಡೆಯುಂ, ಹರಿಶ್ಚಂದ್ರರಸನೆಯನೃತೋಕ್ತಿಯಂ ನುಡಿಯಲರಿಯದು. ಆರಯಲ್ಲಿದು ನಿಸದಂ" ಎಂದು ನಿಶ್ಚೈಸಿ ಪೇಳ್ವ ವಸಿಷ್ಠವಚನಂಗಳ್ಗಾಜ್ಯಾಹುತಿಗಳಿಂ ಪ್ರಜ್ವಲಿಪ ಜ್ವಲನನಂದದೆ ಗಾಧಿನಂದನಂ ಚಂಡಕೋಪಮನಾಂತು, ಉರಿದೆಳ್ದು, "ವಸಿಷ್ಠಾ, ನಿನ್ನಯ ನುಡಿ ನಿಕ್ಕುವಂ ತಿಳಿವೆನಲೆ!" ಎನಲಾ ಅರುಂಧತೀಪತಿ "ಕಲ್ಗೊಂಬೆಗೆ ಚಕ್ಕುಲಗುಳಿಯೆ? ನಡೆನಡೆ" ಎಂದು ಪರಿಹಾಸಂಗೆಯ್ದಂ. ಅದರಿಂ ಮುನಿದು, ಕೌಶಿಕಮುನಿ "ಆನೆಂತಾದೊಡಂ ಚಲಂಬಿಡಿದು ತ್ರೈಶಂಕವನಂ ಬೊಂಕಿಸುವೆಂ ಕಣಾ!" ಎನೆ "ಅಂತಾದೊಡೆ ನಿನತ್ತು ಬಲುಮೆಯೆ! ಆ ಮಾನವೇಶ್ವರಂ ಸರ್ವೈಶ್ವರ್ಯಂಗಳಂ ನೀಗಿ ಪುತ್ರ ಕಳತ್ರಂಗಳಂ ಪರಿತ್ಯಜಿಸಿದೊರ್ಡಂ, ಸತ್ಯಪರಿತ್ಯಾಗಮಂ ಗೆಯ್ಯಲಾರಂ. ಅವಂ ಪುಸಿತನಾಗೆ, ನಾನಾಕ್ಷಣಮೆ ಪರಿತ್ಯಕ್ತಾತ್ಮೀಯಧರ್ಮನಾಗಿ, ಸುರಾಪೂರಿತ ನರಕಪಾಲಂ ಕಯ್ಯೊಳ್ ಮೆರೆಯೆ, ಜವನ ದೆಸೆಗೈದುವಂ" ಎಂದು ವಸಿಷ್ಠಂ ಪೂಣಲಾಗಾಧೇಯಂ, "ಆ ಇಳೆಯಾಣ್ಮನಿಂ ಪುಸಿಯನೊರೆಯಿಸಲಾರದಿದೊರ್ಡೆ, ಹಿಮವನ್ನಗದೊಳ್ ಚಿರಕಾಲಮುರುನಿಷ್ಠೆಯಿನಾಂಗೆಯ್ದ ತಪಃಫಲದೊಳರೆಯಮಾನಗಧೀರಂಗಿತ್ತು, ನಿರ್ದುಷ್ಟಂಗಳಾದೈಶ್ವರ್ಯಂಗಳಿಂ ಸಪ್ತದ್ವೀಪವತಿಯಾಗೊಪ್ಪುವ ಈ ಭೂಚಕ್ರಮನೆಲ್ಲಮನಕುಟಿಲವಿಲಾಸದಿಂ ಪೊರೆಯಿಸುವೆಂ. ಅಲ್ಲದೆಯುಮಾ ನೆಲದೊಡೆಯನಂ ಪದಿನಾಲ್ಕು ಮನ್ವಂತರಂಗಳನ್ನಮಿಾಬಲಾಂತಕನ ರ್ಧಾಸನದೊಳಿಡುವೆಂ" ಎಂದು ಪೂಣ್ದಂ. ಆಗಳನೇಕ ದುರ್ನಿಮಿತ್ತಂಗಳ್ ಕಾಣವರಲಾ ವಾಸವಂ ನಾಸಾಗ್ರನ್ಯಸ್ತತರ್ಜನಿಯಾಗುತ್ತೆ,

ಓಲಗಮನುಳಿದಂ. ಉಳಿದ ಬೃಂದಾರಕಬೃಂದಂಗಳ್ ಈ ನೆವ ದೊಳಾದೊಡಂ "ಹರಿಶ್ಚಂದ್ರನ ಸತ್ಯಸಂಧತೆಯಂ ಕಾಣಲಾದಪುದು ಗಡಾ!" ಎಂದಾರಯ್ಯುತೆ ನಿಜಭವನಂಗಳಂ ಸಾರ್ದುವು. ಕುಂಭಸಂಭವ ಪ್ರಭೃತಿ ಮುನಿಪತಿಗಳೆಲ್ಲರುಂ ಓರೊರ್ವರ್ಗೊರೆಯದೆ ತವಕದೆ ನಿಜಭವನಂಗಳನೈದಿದರ್. ವಸಿಷ್ಠಂ "ಭಾಪೆಲೈ! ಕೌಶಿಕಮುನಿ, ಮತ್ತೇನುಮಂ ಕಿಡುನುಡಿಯನಾಡದೆ, ಹರಿಶ್ಚಂದ್ರನಂ ಹರಿಹಯನರ್ಧಾಸನದೊಳಿಡುವೆನೆಂದೈ. ನಿನ್ನಯ ಶಪಥಂ ಮೆಚ್ಚ ತಕ್ಕುದು" ಎಂದು ಪರಿಹಾಸಂ ಗೆಯ್ದು ಮೆಲ್ಲನಿಳೆಗಿಳಿದಂ. ವಿಶ್ವಾಮಿತ್ರಂ ಬಿಂಕಂ ಮಿಗೆ ತ್ರೈಶಂಕವನಂ ಬೊಂಕಿಸಲುಪಾಯಮಂ ಚಿಂತಿಸುತ್ತೆ, ನಿಜಾಶ್ರಮದೇಶಮನಾಶ್ರಯಿಸಿದಂ.

ಆ ಸಮಯದೊಳೀಭೂತಳದೊಳ್ ಹರಿಶ್ಚಂದ್ರ ಧರಾತಳೇಂದ್ರಂ ನಿರಂತರ ಕ್ರತುದೀಕ್ಷಾನಿರತನಾಗಿ, ಒರ್ಜನ್ನಮಂ ವಿರಚಿಸಿ, ವಿರಿಂಚಿ ಪ್ರತಿಮಾನ ವಿಪ್ರತತಿಗಪ್ರಮೇಯ ಭೂರಿದಾನಂಗಳನಾಚರಿಸುತ್ತಿರ್ದಂ. ಅದನರಿತು ವಿಶ್ವಾಮಿತ್ರನವಸರಮಿದೆಯೆಂದಯೋಧ್ಯೆಗೆವಂದಾ ಮಹೀಕಳತ್ರನಂ ಕಂಡು, ಆತನಿಂದುಚಿತ ಸತ್ಕಾರಂಗಳಂ ಪಡೆದು, "ನರೇಂದ್ರಾ! ರಾಜನ್ಯರೊಳತಿ ವದಾನ್ಯಧನ್ಯನಾದ ನಿನ್ನಂ, 'ಸುರತರುವಂ ಸಾರ್ದು ರಸಾಲಫಲಮನೆರೆವ ಮರುಳನಂತೆ' ಅಲ್ಪಫಲಮನೊಂದಂ ಕೇಳಲೈತಂದೆಂ. ಅದಾವುದೆನೆ, ಚಿರಕಾಲದಿಂ ನೆನೆದಿರ್ಪ ಜನ್ನಮೊಂದಿರ್ಪುದು. ಅದರಿನಾಪನ್ನಗಾಭರಣಂ ಮಿಗೆ ಪ್ರೀತನಪ್ಪಂ. ಅದರ್ಕೆ ಆನೆಯನಡರಿದೊರ್ವ ಮನುಜಂ ನಿಗುರ್ಚಿನಿಂದು ಬಾನ್ಗೆಸೆದ ಮಣಿ ಪಾರ್ವನಿತು ವರಹಂಗಳ ರಾಶಿ ಯಾಗವೇಳ್ಕುಂ. ಭವದನ್ಯರಿನದಲಭ್ಯಮೆಂದರಿತು ಯಾಚಿಸೆಂ. ಎನ್ನಂ ವಿಹಿತಾಧ್ವರವಿಧಾನನಂ ಗೆಯ್ವೆಯೊ! ಅಸಂವಿಧಾನನಂ

ಗೆಯ್ವೆಯೊ !" ಎಂದು ಕಯ್ಗಳಂ ನೀಡಿ ನಿಂತಿರ್ಪ ಸಂಯಮಿ
ಯಂ ನೋಡಿ ಹರಿಶ್ಚಂದ್ರನಿಂತೆಂದಂ —

"ಮುನಿವರ್ಯರೆ, ಪರಮ ಬ್ರಹ್ಮಣ್ಯರುಮತಿ ಪುಣ್ಯರುಮಪ್ಪ
ನಿಮ್ಮಾಗಮದಿನೆನ್ನ ಯಾಗಂ ಸಾರ್ಥಕಮಾದತ್ತು. ಕೃತಾರ್ಥನಾದೆ
ನಾಂ. ಎನ್ನ ಭವನಂ ಪರಮಪಾವನಮಾದತ್ತು. ಈ ಸಮಯ
ದೊಳ್ ನಿಮ್ಮಂದದ ಸಂಯಮಿಗಳ್ಗೀವುದತಿ ಶ್ಲಾಘ್ಯಮಲ್ತೆ ? ಒಯ
ಸಿದ ಪಣಮಂ ಮನದಣಿವನಿತು ಕೈಕೊಳ್ವುದು" ಎಂದು ಧನಾಗಾ
ರಮಂ ತನ್ನಧೀನಂಗೆಯ್ಯಲಾಮುನಿವರಂ, "ಅಹುದೈ ವದಾನ್ಯತೆ!
ದಾತೃವೆನೆಯುಂ, ಧರಾನೇತೃವೆನೆಯುಂ, ನೀನಲ್ಲದೀಭೂತಳದೊಳ್
ಮೇಣೊರ್ವನಿರ್ಪನೆ?" ಎಂದು ಪೊಗಳ್ದು ತವಕದಿನೆಳ್ದು, "ಆ
ಜನ್ನಮಂ ನೆಗಳ್ಚಲಿನ್ನುಂ ವ್ಯವಧಾನಮಿರ್ಪುದು. ಸಮಯಮೊದವ
ಲೊಡನೈತಂದು ಆ ಪಣಮಂ ಕೊಂಡು ಪೋದಪೆಂ. ಅನ್ನೆವರಮದು
ನಿನ್ನ ಬೊಕ್ಕಸದೊಳೆ ಇರ್ಕೆ. ನಿನಗೆ ದೀರ್ಘಾಯುರಾರೋಗ್ಯಂಗ
ಳಕ್ಕೆ! ಆಂ ಪೋಗಿವರ್ಪೆಂ" ಎಂದು ಪೇಳ್ದು ನಿಜೇಚ್ಛೆಯಿಂ ಪೊರ
ಮಟ್ಟಂ. ಹರಿಶ್ಚಂದ್ರಂ 'ಈ ಮುನಿ ಮಿಗೆ ತಾಮಸಂ. ತಾಂ ಬೇ
ಡಿದ ಪಣಮನೀಗಳೆ ಕೈಕೊಳದೆ, ಸಾಲಮಂ ಮೇಲಿಟ್ಟುಪೋದಪಂ"
ಎನುತ್ತೇನುಮಂ ಪೇಳಲಾಗದೆ ಸೈತುಪೋಗಲಿತ್ತು ಅಪ್ರಮತ್ತ
ವೃತ್ತಿಯಿಂ ಪ್ರವರ್ತಿಸುತ್ತಿರ್ದಂ.

ಅತ್ತ ಪೋಗಿ ವಿಶ್ವಾಮಿತ್ರನಾ ಮಹೀಕಳತ್ರನಂ ಬೊಂಕಿಸು
ವ ಉಪಾಯಮನಾರಯ್ದು, ಗಣನಾತೀತ ಮೃಗವ್ರಾತಂಗಳನನಲ್ಪ
ಜವಸತ್ವಂಗಳಂ ಕಲ್ಪಿಸಿ, ಹರಿಶ್ಚಂದ್ರಪರಿಪಾಲಿತಮಾದ ದೇಶಮಂ
ಕಾಡಿಸಂತೆ ಕಳುಹಲಾಕ್ರೂರಸತ್ವಂಗಳುಂ ಕೊರ್ಬಿನಿಂದುರ್ಬಿ,
ಎತ್ತ ನೋಡಿದೊಡತ್ತ ಸುಳಿಯುತೆ, ಜನಪದಂಗಳಂ ಪೊಕ್ಕು, ಪೊಲ

ನೆಲಬೇಲಿಮರಗಿಡುಪೈರುನೀರ್ದನಕರಕುರಿಮರಿ ಮೊದಲೆನಿಪ ಸಮಸ್ತವಸ್ತುಗಳಂ ವಿಧ್ವಸ್ತಂಗಳಾಗಿಮಾಡಲ್ತೊಡಗಿದುವು. ಅವುಗಳಿಂ ಗಾಸಿವಡೆದ ಪ್ರಜೆಗಳೆಲ್ಲರುಂ ಮಿಗೆ ತಲ್ಲಣಿಸಿ, ಹರಿಶ್ಚಂದ್ರಧರಾತಲೇಂದ್ರನಂ ಸಾರ್ದು ಮಸ್ತಕನ್ಯಸ್ತಹಸ್ತರಾಗಿ, "ಜೀಯ! ನಿಮ್ಮ ವರಕೃಪಾವಿಶೇಷದಿಂದೀದೇಶದ ಪ್ರಜೆಗಳಾದ ನಾಂಗಳ್ ಹೈನುಬೆಳೆಗಳೊಳ್ ಕೊರತೆಯಿಲ್ಲದೆ, ಮನೆಮಂದಿಮಕ್ಕಳ್ ಪೆರ್ಚೆ ಅನ್ನವಸ್ತ್ರಂಗಳ್ಗಲೆಯದೆ, ಇನ್ನೆಗಮಾವಕೇಡುಮನಾನದೆ ಬಾಳುತ್ತಿರ್ದೆವು. ಅದಂತಿರಲೀಗಳಾವ ಪಾಪಮೊ! ಕಾಣೆಂ! ಮಿತಿಯಿಲ್ಲದ ವೇಗಶಾಲಿಗಳಾದ ಕ್ರೂರಸತ್ವಂಗಳನೀಪೊಡವಿ ಪೆತ್ತುದೊ, ಎನಲೆತ್ತಲುಂ ತೀವಿ ಊರೊಳಪೊಕ್ಕು ಗೃಹಾರಾಮಕ್ಷೇತ್ರಂಗಳೊಡನೆ ಅಹೋರಾತ್ರಂಗಳೊಳ್ ಜನಂಗಳ ರೂಪನಳಿಯಿಸುತಿರ್ಪುವಾದುದರಿಂದೀ ಮೃಗಬಾಧೆಯಂ ನೀಗಿ ನಮ್ಮನೋವಲ್ ಚಿತ್ತೈಸು" ಎನಲಾಮನುಜೇಶ್ವರನವರ ಬಿನ್ನಪಮಂ ಕೇಳ್ದು, "ಚಿಂತಿಸಬೇಡಿಂ, ನಾಳೆಯಾ ನಾಮೃಗವಾಳಿಯಂ ಸೀಳಿ, ನಿಮ್ಮಿಯ ಗಾಸಿಯಂ ಮಸುಳಿಸುವೆಂ" ಎಂದು ಬೀಳ್ಕೊಟ್ಟು, ಮರುವಗಲ ಪೊಳ್ತುದೆಯೆಳ್ದು, ಸಮುಚಿತ ಕೃತ್ಯಂಗಳನೊಡರ್ಚಿ, ಮೃಗಯಾಸಕ್ತರಪ್ಪ ಕತಿಪಯಾಖೇಟಕಪರಿವೃತನಾಗಿ, ಸತೀಸುತಾಮಾತ್ಯರಿಂದೊಡಗೂಡಿ, ವಾಯುವೇಗಮನೋವೇಗ ಹಯಂಗಳಂ ಪೂಡಿರ್ದ ರಥಮನೇರಿ, ಕೌಬೇರದಿಶಾಭಿಮುಖನಾಗಿ ಪೊರಮಟ್ಟು, ಇದಿರೊಳ್ಳೆತಂದ ಮೃಗಂಗಳಂ ಕೊಲ್ಲುತ್ತೆಪೋಗಿ, ಗಂಡಕಪುಂಡರೀಕ ಶುಂಡಾಳ ವ್ಯಾಳ ಋಕ್ಷ ಹರ್ಯಕ್ಷ ತರಕ್ಷು ಭೂದಾರ ಪ್ರಮುಖಕ್ರೂರಸತ್ವಶರಣ್ಯಮುಂ, ಬ್ರಹ್ಮಣ್ಯಾಶ್ವತ್ಥ ಕಪಿತ್ಥ ನಿಂಬ ಕದಂಬಾಶೋಕ ಮಧೂಕ ಮಾಕಂದ ಚಂದನ ಮಂದಾರ ಸಿಂದುವಾರ ಕೋವಿದಾರ ಕಿಂಶುಕ ಶಿಂಶುಪಾರಿಷ್ಟ

ಗುಗ್ಗುಲ ನ್ಯಗ್ರೋಧ ಪ್ಲಕ್ಷಾದಿ ವೃಕ್ಷಜಾಲ ನಿಕ್ಷಿಪ್ತ ನೀಡಸ್ಥ ನಾನಾ ಪಕ್ಷಿಕುಲ ಕಲಕಲಧ್ವಾನಗಣ್ಯಮುಮಾಗಿಯೊಪ್ಪುತ್ತಿರ್ದ ಮಹಾರಣ್ಯಮಂ ಪೊಕ್ಕು, ಋಕ್ಷಹರ್ಯಕ್ಷಾದಿ ಭಯಾನಕ ಮೃಗನಿಕಾಯಮಂ ಮಿಗೆ ಬೆಂಗೊಂಡು, ಅಸುವಂಗೊಳ್ಳುತ್ತುಂ, ಉಲಿಯುತ್ತುಂ, ಪಲತೆರದೆ ಮೃಗಯಾವಿಹಾರಮಂಗೆಯ್ದು, ಪೊಳಲ್ಗೆ ತಿರುಗಲ್ ಮಾರ್ಗಾನ್ವೇಷಣಮಂ ಗೆಯ್ಯುತೆ, ದೈವವಶದೆ ವಸಿಷ್ಠಾಶ್ರಮಮಂ ಸಾರ್ದು, ತನ್ಮುನಿಕೃತಹಿತೋಪದೇಶಮಂ ಮನದೊಳಿಟ್ಟು, ಅಲ್ಲಿಂ ಪೊರಮಟ್ಟು, ಕಪಟಕ್ರಿಯಾಕುಶಲನಪ್ಪ ಕುಶಿಕನಂದನನಿಂ ನಿರ್ಮಿತಮಾದ ಪೊಂಬಣ್ಣದೆರಳೆಯನೊಂದನಾಲೋಕಿಸಿ, ಅದರ ಸೌಕುಮಾರ್ಯಸೌಂದರ್ಯಂಗಳ್ಗೆ ಮರುಳಾಗಿ ಕೊಲ್ಲಲೊಲ್ಲದೆ, ಬಳಲಿಸಿ ಪೊಳಲ್ಗೆ ಕೊಂಡುಪೋಗುವ ಜತನದೆ ಬೆಂಗೊಳಲ್, ಅದಿತ್ತತ್ತಲೋಡಿ, ಕೈಸೇರಸಿರ್ಕ್ಕಿ ಸಿರ್ಕ್ಕದಂದದೆ ಬಳಲನಿಂದು, ಆಸೆಗೊಳಿಸಿಯುಂ ಮೋಸಗೊಳಿಸಿ, ವಿಶ್ವಾಮಿತ್ರನಾಶ್ರಮದೆಡೆಗೆ ಪೋಗಿಯದೃಶ್ಯಮಾದುದು.

ಆಗಳಾ ಹರಿಶ್ಚಂದ್ರಂ ಮಿಗೆ ಬಳಲ್ದದು ಪೋದ ದೆಸೆಯುಂ ಕಾಣದೆ, ಮನದೊಳ್ ನಾಣುಮಂ ಚಲಮುಮನೊಂದಿ, ಅದರಡಿಯಜಾಡುಗಳನರಸುತೆ ಪೋಗಿ, ಅತಿದೂರದೊಳೊಂದು ಪುಣ್ಯಾಶ್ರಮಮಂ ಕಂಡು, ಅಲ್ಲಿ ಮಾರ್ಗಾಯಾಸಮಂ ನೀಗಿ, ಇನಿಸು ವಿಶ್ರಮಿಸಲ್ ಬಗೆದಂದು, ಅದರ ಸನಿಹದೊಳೆ ಪುತ್ರಕಳತ್ರಂಗಳೊಡನೆ ತೇರನಿಳಿದು, ತನಗೆ ಮುನ್ನಮೆ ಕುದುರೆಯನಿಳಿದು ಹಸ್ತಾವಲಂಬಮನೀವ ಕೋಲ್ಕಾರಂಗೆ ತದಾಶ್ರಮರಮಣೀಯತೆಯಂ ಪೇಳ್ದು, ಮೆಚ್ಚುತೆ ಪೊಕ್ಕು,—ತನ್ಮಧ್ಯದೊಳ್ ಗಗನಮಣಿಯೆಂಬ ಬಿಯದನಬಾಧೆಯಂ ಸೈರಿಸಲಾಗದೆ, ನೆರೆನೋಡಿ ಪಾರಿಪೋಗುವ ಪಥಿಕ

ವೃಗಂಗಳ ದಾಹಮಂ ನೀಗಿ, ತಾಪನಿವಾರಣೆಯುಂ ಗೆಯ್ಯುಲಿರ್ಪ ಬಳ್ಳಿವನೆಗಳಿಂ ಮೆರೆಮೆರೆದು, ಪರ್ಬಿ ಸಾಂದ್ರವಾಗಿ ಮುಗಿಲ್ಮುಟ್ಟು ವೆಲೆಜೊಂಪಂಗಳ ಸೊಂಪಿನಿಂ ಬಿಸಿಲ್ಪುಗಲೆಡೆಗುಡದ ಮರಂಗಳಿಂ ದೊಪ್ಪುವ ತೀರಂಗಳಿಂ, ತೀರಂಗಳಂ ಮೀರುವ ನೀರ ಪೂರದೊಳೊ ಗೆವ ನೊರೆಯಿಂ ಸೂಗಯಿಪಲೆಗಳೊಳೊಲೆವ ಅರಸಂಚೆಗಳಿಂ, ಅಂಚೆಗಳೊಡಲ್ ಮಿಂಟುವ ವೃಣಾಳಾಗ್ರಂಗಳಿಂ ಕರಾಳವ್ಯಾಳ ಸ್ಫಟೆಗಳಂದದಿನೊಪ್ಪುವರಲ್ದರವಿಂದಂಗಳಿಂ, ಅರವಿಂದಂಗಳೊಳ್ ಸುರಿವ ಮರಂದಮನೀಂಟಿ ಸೊರ್ಕಿದಿಂದಿಂದಿರಂಗಳ ಝೇಂಕಾರಂ ಗಳನನುಕರಿಪ ತೀರತರುಸ್ಥಿತ ಕೀರಶಾರಿಕಾಮುಖ ಶಕುನಕುಲ ಕಲಕಲಧ್ವಾನಂಗಳಿಂ ಮೆರೆವ ಸರಸಿಯನೊಂದಂ ನಿಟ್ಟಿಸಿ, ಮೆಯ್ಯ ತಾಪಮಾರೆ ಸ್ನಾನಪಾನಂಗಳನೊಡರ್ಚಿ, ತತ್ತೀರದೊಳಿರ್ಪ ಮಲ್ಲಿ ಗೆಯ ಪಂದರಂಗಳೊಳ್ ಕಾಣ್ಬ ಚಂದ್ರಕಾಂತಮಣಿವೇದಿಕೆಯೊಳ್ ಚಂದ್ರಮತಿಯ ಊರುಗಳೆ ಉಪಧಾನವಾಗೆ ಶಯನಿಸಿ, ಇನಿಸು ನಿದ್ದೆಗೆಯ್ದು, 'ತಾಂ ಭದ್ರಾಸನಮನಡರ್ದು ಪೇರೋಲಗಂಗೊಟ್ಟಿರೆ, ಚಂಡಕೋಪಿಯಾದೊರ್ವ ತಪೋಧನನೈತಂದು ತನ್ನಂ ಸಿಂಹಾಸ ನದತ್ತಣಿಂ ಕೆಳಗೀಳ್ದು, ವಾಮಪಾದಮಂ ನೀಡಿ ಮುಕುಟಮಂ ನೆಗೆವೊದೆದಂತೆ' ಕನಸಂಕಂಡು, ಅಳ್ಕಿಳ್ದು, ಕನವರಿಸಲ್ತೊಡಗಿದಂ. ಅದಂ ಕಂಡು ಚಂದ್ರಮತಿ ಚಿಂತಿಸಿ, ಉಚಿತ ವಚನಂಗಳಿಂದಿನಿ ಯನಂ ಸಂತವಿಸಿ, ಕನವರಿಕೆಯಂ ಮರೆಯಿಸಿ, ಅದರ ಕಾರಣಮ ನರಿತು, "ಇನ್ನುಮಿಲ್ಲಿರ್ದೊಡೆ ಬನ್ನಂ ತಪ್ಪದು; ತುರಿಪಂ ಗೆಯ್ವಂ" ಎಂಬನಿತರೊಳೆ ಕೌಶಿಕಪ್ರೇಷಿತೆಯರಪ್ಪವರಿರ್ವರ್ ಪೊಲತಿಯರೈ ತಂದು, ಮೆಚ್ಚುವಂದದೆ ಪಾಡಿ, ಆಡಿ, ಆ ರಾಯನ ಕೂಡೆ ಸರಸ ಸಲ್ಲಾಪಮಂ ಗೆಯ್ಯಲುಜ್ಜುಗಿಸಿದರ್. ಭೂರಮಣನಾಮುಟ್ಟಲಾ

ಗದ ಕನ್ನೆಯರ ದುಶ್ಚೇಷ್ಟೆಗಳನೊಲ್ಲದೆ ಸಾಸದಿಂದೊಡಲ್ ಮುರಿಯೆ ಬಡಿದಟ್ಟಿದಂ. ಈ ಹದನನರಿತು ಗಾಧಿನಂದನಂ ಕೆರಳ್ದ ಲೇಲಿಹಾನನಂದದೆ ಮುನಿದುರಿವೆಳ್ದು ಬುಸುಗುಟ್ಟುತ್ತೈತಂದು, ಆ ಭೂಧವಂ ಮುನ್ನಮೆ ಕನಸಂಕಂಡನಿತುಮನನುಭೂತಮಾಗೆಸಗಿದಂ. ಬಳಿಕಾ ಮಾನವೇಂದ್ರಂ ಮಾನಮನುಳಿದು ಹೇಡಿಯಂದದೆ ಬಂದ ದುರಿತಕೆ ಬೆದರಿ ಕೈಮುಗಿದು, 'ದಾಸನ ತಪ್ಪು ದಂಡದಿಂ ಸಲ್ವುದು' ಎಂಬಂದದಾ ಮುನಿವಲ್ಲಭನಡಿಗೆರಗಿ ಏಳದಿರೆ, ಪ್ರಸನ್ನನಂತಾಮುನಿವರಂ "ಬಾಳ್ವೆನೆಂದೊಡಾ ಚನ್ನೆ ಕನ್ನೆಯರಂ ಬಡಿದ ಪಾಪಕೆ ತಕ್ಕ ಪ್ರಾಯಶ್ಚಿತ್ತಮಾಗಿ ಅವರನೆ ಕೈಕೊಳ್ವುದು" ಎನೆ, ಹರಿಶ್ಚಂದ್ರಂ "ಹರಿಹರೀ! ಎಂತಹ ನುಡಿಗೇಳ್ದೆಂ!" ಎಂದು ಕಿವಿಗಳಂ ಮುಚ್ಚಿ, ಗಾಧೇಯನಂ ನೋಡಿ, "ಇಂತು ಬಿರುನುಡಿಗಳಿಂದೆನ್ನಂ ಕಾಡುವುದರತ್ತಣಿನೆನ್ನಯ ಹರಣಮಂ ಹರಿಸುವುದು ಲೇಸು! ಬೇಳ್ಕುಮೆಂದೊಡೆನ್ನಯ ಸಾಮ್ರಾಜ್ಯಮನಾದೊಡಂ ಉಳಿದಪೆನಲ್ಲದೆ ಕುಲಶೀಲಂಗಳನುಳಿದಪೆನೆ?" ಎಂದು ದೈನ್ಯದಿನೊರೆದಂ. ಅದನೆ ಗುರಿವಿಡಿದಾ ಕಪಟ ತಾಪಸಿ "ಹರಿಶ್ಚಂದ್ರಾ, ನೀನಿನಕುಲಸಂಭವಂ! ಆಡಿದ ನುಡಿಗವಡೆಪ್ಪುದು ಗಡಾ! ಮೃದುವಾಗ್ವಿತಶಾರಿಕೆಯರಪ್ಪಾ ಕುವರಿಯರನೊಲ್ಲದೆ ಸಾಮ್ರಾಜ್ಯಮಂ ತೊರೆವೆನೆಂದೈ. ಅಂತಾದೊಡೆ ಈಗಳೆ ಎನಗೆ ನಿನ್ನ ಸಾಮ್ರಾಜ್ಯಮಂ ಧಾರಾದತ್ತಂಗೆಯ್ವುದು" ಎನುತೆ ನಿರ್ಬಂಧಿಸಲ್, ಅವನುಮಂತೆಸಗಿ ಮಂತ್ರಿಪುತ್ರಕಳತ್ರಂಗಳನೊಡಗೂಡಿ, ನಿಜನಗರಿಗೈತಂದಾವರ್ತಮಾನಮಂ ಪೌರಜಾನಪದಾನೀಕಕ್ಕರಿಪಲವರ್, "'ಈನುವನ್ನೆಗಂ ಕಾದು ನರಿಯ ಬಾಯ್ಗೆ ಕೊಟ್ಟಂತೆ' ನಮ್ಮನಿನಿತು ದಿನಮುಮಿತಾನುಕಂಪೆಯಿಂ ಪೊರೆದೀಗಳೀಬೆಟ್ಟದನ ಕೈಗಿತ್ತು ಪೋಗುವುದೆ?" ಎಂದು ಹಂಬಲಿಸೆ, ಅವರಂ

ಪಲತೆರದುಚಿತ ವಚನಂಗಳಿಂ ಸಂತವಿಸಿ, ತಾನಡವಿಗೆ ತೆರಳ್ದಂ. ಅನಿತರೊಳ್ ವಿಶ್ವಾಮಿತ್ರಂ ಮಿತ್ರಕುಲಪವಿತ್ರನಂ ಆರ್ದು "ಎಲೆ! ನೃಪಾಧಮ, ನಿನ್ನಯ ಕಿಡುನಡತೆಗಳನಾಂ ಬಲ್ಲೆಂ! ಪೂರ್ವದತ್ತ ಮಾದೆನ್ನ ವಿತ್ತಮುಂ ಸಲ್ಲಿಸದೆತ್ತ ಪೋದಪ್ಪೆ? ಇದು ನುಡಿ ತಪ್ಪಿದ ಹದನಲ್ತೇಂ?" ಎಂದು ಪಲನಿಟ್ಟುರಂಗಳನಾಡೆ, ಹರಿಶ್ಚಂದ್ರಂ "ತಾಪ ಸವರ್ಯರೆ, ನಿಮ್ಮ ಪಣಮೆನ್ನ ಬೊಕ್ಕಸದೊಳೆ ಇರ್ಪುದು. ಬ್ರಹ್ಮ ಸ್ವಮಾದ ನಿಮ್ಮ ಪಣಮುಂ ಸ್ಪೃಶಿಸಲಾದೊಡಂ ಯತ್ನಿಸಿದವನಲ್ತು. ಎನ್ನ ಸ್ವತ್ವಮೆಲ್ಲಮುಮಂ ಕೊಟ್ಟ ಬಳಿಕ್ಕೆ ನಿಮ್ಮ ಮುನ್ನಿನ ಪಣಂ ಬೇರೊಂದಿರ್ಪುದೆ?" ಎಂದು ಬಿನ್ನೈಸೆ, ಕುಶಿಕನಂದನಂ "ಎಲೆ! ಮಾನವಾಧಮ, ಸುಮ್ಮನೇಕೆ ಸಟೆಯಾಡುವೈ? ನೃಪತಿಗಳಾವಗಂ ನೀತಿವಿಹೀನರೆಂಬುದನಾಂ ಬಲ್ಲೆಂ. ಮುನ್ನಿತ್ತೆಮ್ಮ ಧನಮನೀಯದೆ ಪೋಗಲಾಗದು" ಎಂದು ಪೇಳಲಾ ನೃಪವರಂ "ಅದನೆತ್ತಲಾದೊ ಡಂ ಗಳಿಸೀವೆಂ" ಎನೆ, "ನಿನ್ನಂ ನಚ್ಚುವರಾರ್" ಎನುತೆ, ತನ್ನವೊಲೆ ಕಪಟಕ್ರಿಯಾದಕ್ಷನಪ್ಪ ನಕ್ಷತ್ರಕನೆಂಬೊರ್ವ ಪ್ರಿಯಶಿಷ್ಯನಂ ಪಿಂದಿಟ್ಟು, ತದರ್ಥಮೆ ಭಾರ್ಯಾಪುತ್ರರಂ ಮಾರಿಸಿ, ಚಂಡಾಲಕಿಂಕ ರನಾಗಿ ಮಾಡಿಸಿ, ಕುಂಡಲಿದಶನದಿಂ ಕುವರನಂ ಪಂಚತ್ವಮನೊಂ ದಿಸಿ, ಚಂದ್ರಮತಿಯನಿಲ್ಲದಲ್ಲದ ನಿಂದೆಗೊಂದಿಸಿಯುಂ, ಹರಿಶ್ಚಂದ್ರ ನರೇಂದ್ರನಂ ಬೊಂಕಿಸಲಾಗದೆ, ಆ ರಾಜಸತ್ತಮನ ಸತ್ಯಸಂಧತೆಗೆ ಮೆಚ್ಚಿ ಪ್ರತ್ಯಕ್ಷರಾದ ದೇವಗಣ ಸೇವಿತ ಹರಿಹರ ವಿರಿಂಚಿಗಳ್ಗೆ ತನ್ನಯ ಪಂತದ ಚಂದಮುಂ ತಿಳುಪಿ, ಚಕ್ರಿಯುಂ ಬೇಡಿ ಸುದರ್ಶನ ಚಕ್ರಮನಾ ಚಕ್ರವರ್ತಿ ಬೆಸಸಿದುದನೆಸಗುವಂತನುಗ್ರಹಿಸಿ, ಕಟ್ಟೆ ರಕದಿನಾಧರಣೀಧವಂಗಿಂತೆಂದಂ — "ಎಲೆ ಸತ್ಯವತ್ಪುತ್ರ, ಸತ್ಯಕ್ಕೆ ಆಲವಾಲಂ ನೀನೆ ಗಡ! ನಿನ್ನ ಸತ್ಯಸಂಧತೆಯುಂ ಪರಿಕಿಸಲ್ಬಯಸಿ,

ಇನಿತಂ ಗೆಯ್ದೆನಲ್ಲದೆ ಪೆರತೊಂದಿಲ್ಲಂ. ಆನೀಕಜ್ಜಕುಜ್ಜುಗಿಸುವೆಡೆಯೊಳ್ ನಿನ್ನಂ ಸತ್ಯಚ್ಯುತನಂ ಗೆಯ್ಯದಿರ್ದೊಡೆ, ಸಪ್ತದ್ವೀಪವತಿಯಾದೀವಸುಮತಿಯನೆಲ್ಲಮಂ ಏಕಾತಪತ್ರಮಾಗಿ ನಿನ್ನಿಂ ಪೊರೆಯಿಸುವನೆಂದು ಪೂಣ್ದೆಂ. ಈಗಳದರ್ಕೆ ತಕ್ಕುದೆನಿಪ ಪ್ರೈಮೆಯುಂ ನಿನ್ನೊಳ್ ನೆಲೆಗೊಳಿಸುವೆಂ" ಎಂದು ಪೇಳ್ದು ತನ್ನ ತಪಃಫಲದೊಳರ್ಧಮನಾಧರಣೀಧವಂಗೆ ಧಾರಾಪೂರ್ವಕಮಾಗಿತ್ತು, "ಇನ್ನು ಮಾಚಕ್ರವಾಳಮಾದ ಭೂಚಕ್ರಮನವಕ್ರಗತಿಯಿಂ ಚಕ್ರಂ ಕಜ್ಜಮುಸಗುತಿರೆ ರಾಜ್ಯಭಾರಮಂ ಗೆಯ್ವುದು" ಎನುತೆ ಪರಸಿ, ತಾಂ ಮುನ್ನಮಯೋಧ್ಯಾಧಿಪತ್ಯಮನೆಸಗಲ್ ಬೆಸಸಿರ್ದ ಸುಯಜ್ಞಂಗೆ—

ಶ್ರೀ

'ಸ್ವಸ್ತ್ಯಸ್ತು. ಯಜನಾದಿ ಷಟ್ಕರ್ಮನಿರತನಾಗಿ, ಅಸ್ಮತ್ಪರಮಾಪ್ತಶಿಷ್ಯನಪ್ಪ ಸುಯಜ್ಞಂಗೆ—

ಬ್ರಹ್ಮರ್ಷಿ ವಿಶ್ವಾಮಿತ್ರಂ ಪ್ರೀತಿಪೂರ್ವಕಮಾಗಿ ಬರೆದ ಆಶೀರ್ವಾದ ಪತ್ರಮೆಂತೆನೆ:

ಉಭಯ ಕುಶಲೋಪರಿ, ಸಾಂಪ್ರತಂ. ಅಯೋಧ್ಯಾಪುರಿಯಂ ಹರಿಶ್ಚಂದ್ರ ರಾಜೇಂದ್ರಂಗೆ ಸಕಲ ಸಾಮ್ರಾಜ್ಯದೊಡನೆ ಮುದದೆ ಮಗುಳ್ದಾನಿತ್ತಿರ್ಪುದರಿಂ ಗಜರಥಪದಾತಿತುರಗನಿಚಯಪರಿಚಾರಕರ್ಕಳಂ, ರತ್ನಭೂಷಣ ಧನಧಾನ್ಯ ರಾಶಿಗಳಂ ಎಲ್ಲಮುಮನೊಪ್ಪಿಸಿ, ನೀನಾಳ್ದಿನಿತು ದಿನಂಗಳ ಲೆಕ್ಕದಾಯವ್ಯಯಂಗಳಂ ಪೇಳ್ದುಬರ್ಪುದು.'

ಎನುತೆ ಪತ್ರಮಂ ಬರೆದು ಕಯ್ಬರಹಮುಂಮಾಡಿ, ಹರಿಶ್ಚಂದ್ರಜನೇಂದ್ರನ ಸಮ್ಮುಖದೊಳಿಟ್ಟು, ಇದಂ ಕೊಂಡು ಸುಯಜ್ಞ

ನತ್ತಣಿಂ ಸಾಮ್ರಾಜ್ಯಮಂ ಕೈಕೊಳ್ವುದೆನುತಾಶೀರ್ವಚನಪುರಸ್ಸರ ಮಾಗಿ ಬೀಳ್ಕೊಡಲ್, ಆ ಧರಣೀಧವನಾಮುನಿಪನಾಶಿಷಮನಾಂತು ನಿರೂಪಮಂ ಕೈಕೊಂಡು, ಪುತ್ರಮಿತ್ರಕಳತ್ರಯುತನಾಗಿ ಕಾಶಿಕಾ ನಗರದತ್ತಣಿಂ ತೆರಳಲನಿತರೊಳೀವೃತ್ತಾಂತಮನೆಲ್ಲಮಂ ಕಾಶೀಶ ನರಿತು, ಚತುರಂಗಬಳಂಗಳೊಡಗೂಡಿವಂದು, ಆ ಚಕ್ರವರ್ತಿಯನಿ ದಿರ್ಗೊಂಡು, "ಸಾರ್ವಭೌಮಾ, ನೀಂ ಸಾಮಾನ್ಯರಂತೆ ಪಾದಚಾರಿ ಯಾಗಿಯುಂ, ವಿಗತಪರಿವಾರನಾಗಿಯುಂ, ತೆರಳ್ವುದುಚಿತಮಲ್ತು. ಈ ಪೊಳ್ತೀ ಪೊಳಲೊಳಿರ್ದು, ಎನ್ನ ಮನೆಯೊಳಿರ್ದನಿತೌತನಮ ನಂಗೀಕರಿಸಿ, ಎನ್ನಂ ಧನ್ಯನಂಗೆಯ್ದು ಮರುವಗಲ ಸವಳ್ತಡೆ ಸಸೈ ನ್ಯನಾಗಿ ತೆರಳ್ದು, ವಂದಿಮಾಗಧರ್ ಪೊಗಳೆ, ಮಹಾವೈಭವದೆ ಬಿಜಯಂಗೆಯ್ಯಲವಧರಿಪುದು." ಎಂದು ಪ್ರಾರ್ಥಿಸಲಾತನ ಬಯಕೆ ಯನಾದರಿಸಿ, ಆ ದಿನಮಾಕಾಶಿಯೊಳಿರ್ದು, ಮರುವಗಲ್ ಸವಳ್ತಡೆ ಯೊಳೆಳ್ದು, ಅನಂತವಾಹಿನಿಗಳೋಲಗಿಸೆ, ಕಾಶಿರಾಜನಾಜಾನೇಯ ಮನಡರ್ದು ಮಾರ್ಗಪ್ರದರ್ಶಕನಾಗಿ ಮುಂದೆರಳೆ, ಮಂಗಳದೇವ ತಾಸಂಗಸಂಗತನಾದ ರಥಾಂಗಧರನಂದದೆ ಚಂದ್ರಮತೀಲೋಹಿ ತಾಸ್ಯರೊಡಗೂಡಿ, ಕನಕರತ್ನರಮ್ಯಮಹಾರಥಾಧಿರೂಢನಾಗಿ ಪೊ ರಮುಟ್ಟು, ಅಡಿಗಡಿಗೆ ಕಪ್ಪಂಗಳನೊಪ್ಪದಿನೊಪ್ಪಿಸುತಿದಿರ್ಗೊಂಬ ಮೇದಿನೀನಾಯಕರಂ ಸಾದರದಿನವಲೋಕಿಸಿ, ಮನ್ನಿಸುತೆ, ನಿರಂ ತರ ಪ್ರಯಾಣದೆ ಕತಿಪಯವಾಸರದೊಳೆ ಕೋಸಲದೇಶಮಂ ಸಾರ್ದಂ. ಈ ವಾರ್ತೆಯಂ ಚಾರರತ್ತಣಿಂ ಸತ್ಯಕೀರ್ತಿ ಕೇಳ್ದು, 'ಸತ್ಯಕೀರ್ತಿಗಳ್ಗೆ ಪೆತ್ತವನೆಯಾದ ಮಾರ್ತಾಂಡಕುಲಮಂಡನನೆ ಮಗೆ ಪದುಳಂ ಮಿಗೆ ಆಣ್ಮನಾಗಿ ಮಗುಳೆ ಬಿಜಯಂಗೆಯ್ದಪಂ! ಉಲ್ಲಾಸಮೆಲ್ಲರೊಳ್ ಪಲ್ಲವಿಸೆ ಆ ಭೂವಲ್ಲಭನನಿದಿರ್ಗೊಳ್ವುದು.

ಪೊಳಲೆಲ್ಲಂ ಸಿಂಗರಿಪುದು. ಗೃಹದ್ವಾರಂಗಳೊಳ್ ತೋರಣಂಗಳಂ ಕಟ್ಟಿಪುದು. ಪೊಸಂತಿಲ್‌ಗಳೊಳ್ ಮುತ್ತಿನ ರಂಗವಲ್ಲಿಗಳಂ ಬರೆಯಿಪುದು. ರಾಜಮಾರ್ಗಂಗಳೊಳ್ ಮೃಗಮದಮಿಶ್ರಿತತೋಯಂಗಳಂ ಸಿಂಪಿಸುವುದು. ಬಹಿರ್ದ್ವಾರಂಗಳೊಳ್ ರಂಭಾಸ್ತಂಭಂಗಳಿನೊಪ್ಪುವ ಪಂದರಂಗಳಂ ಪರ್ಬಿಪುದು' ಎಂಬ ಸುಯಜ್ಞನಾಜ್ಞೆಯಂ ಪೊಳಲೊಳ್ಸಾರಿಸಿದಂ.

ಬಳಿಕ್ಕೆ ಸುಯಜ್ಞಂ ಸತ್ಯಕೀರ್ತಿ ಪ್ರಮುಖಾಮಾತ್ಯರಂ ಮುಂಬಿಟ್ಟು ಪೌರಜನಪರಿವೃತನಾಗೆಳ್ತಂದು, ಹರಿಶ್ಚಂದ್ರನನಿದಿರ್ಗೊಂಡು, ತನ್ನಂ ನೋಡಿದೊಡನೆಯೆ ತೇರನಿಳಿದು ಪೊಡಮಡುವ ಪೊಡವಿಯೊಡೆಯನಂ ಸತೀಸುತಸಮೇತನಾಗಿ ಕೆನ್ನಂ ಮನ್ನಿಸಿಯುಂ, ಪರಸಿಯುಂ, "ವಸುಮತೀಶ, ಕೌಶಿಕಪ್ರಕಲ್ಪಿತ ಮಾಯಾಂಧಕಾರಮಂ ಕ್ಷಮಾಕಮಲಬಾಂಧವರಶ್ಮಿಯಿಂ ಪಾಳ್ಗೆಯ್ದು ಜನಂ ಪೊಗಳ್ವ ನನ್ನಗ್ಗಳಿಕೆಯಂ ಕಣ್ಣಾರೆ ಕಂಡೆಂ. ನಿನ್ನಯ ಸುಕೃತಂ ಮೆಚ್ಚತಕ್ಕುದು" ಎಂದು ಪೊಗಳುತಿರ್ಪಾಮುನಿಸಂಕ್ರಂದನಂಗೆ ತ್ರಿಶಂಕುನಂದನನಿಂತೆಂದಂ—"ಗುರುತರ ಕರುಣಾಶರಧಿಯಪ್ಪ ನಿಮ್ಮ ಗುರುವನುಗ್ರಹಿಸೆ ಪೆಸರ್ವಡೆದೆಂ. ಆಮಾಮ್ಯೆಮನನುಗ್ರಹಿಸಲ್ ಕಯ್ಗೂಡದುದೊಂದುಂಟೆ?" ಎನಲಾಸುಯಜ್ಞಂ, "ಅಹುದಹುದು; ಎಮ್ಮ ಗುರುಕರುಣಮೆ ಪೊಗಳತಕ್ಕುದು. ಆತನ ಸೈರಣೆಯುಂ ಜಗದೊಳ್ ನೆಗಳ್ದಿರ್ಕ್ಕುಂ! ಸರ್ವಸಮರುಂ, ಸತ್ಯಧರ್ಮರಕ್ಷಮರುಮಪ್ಪ ನಿಮ್ಮನ್ನರ್ಗೆ ಪೆರರಿನೊಗೆವ ಕೊರತೆಗಳ್ ಪ್ರಕಟಿಸುವುದಿಲ್ಲಮೆಂಬುದು ನಿಮ್ಮ ನುಡಿಗಳಿಂದಮೆ ತೋರ್ಪುದು! ಸಾಸಿರ ಮಾತಿಂದೇಂ? ಎಮ್ಮಗುರು ಚಿರಕಾಲಂ ಶೀತವಾತಾತಪಂಗಳಂ ಸೈಸಿ, ಪೆರ್ಕ್ಕಾಡಂಗಿನಿಂ ಗಳಿಸಿದ ತಪಃಫಲಂ ನಿರರ್ಥಕಮಾಗೆ, ನೆಣಸಿ

ನಿಮ್ಮನೆಣಿಸಲಾಗದೆಡರ್ಗಳಿಂ ಕುಂದಿಸಿ, ತಾಂ ಪಡೆದುದಿತ್ತಲತ್ತಲ್ ನಿಂದೆಯಲ್ಲದೆ ಮೇಣೊಂದಿಲ್ಲಂ. ನೀವಾದೊಡಂ, ಸತ್ಯಸಂಪನ್ನರೆನಿಪ ವಿಖ್ಯಾತಿಯುಂ ಮಿಗೆ ಪಡೆದಿರ್. ಅದರಿಂ ನಿಮ್ಮತ್ತಣಿನೆ ಮಗೆ ಮನ್ನಣೆಯುಪೇಕ್ಷಣೀಯಮಪ್ಪುದು'' ಎಂದು ಪೇಳ್ದು ಸಜ್ಜನಾಕಲಿತಮುಂ, ಆಘೋರಣಾನೀತಮುಮಾಗಿ, ಮುಂದರಾಗಮಂ ತನ್ನಂಗದೆ ಧಿಕ್ಕರಿಸುತಿರ್ಪ ಭದ್ರನಾಗಮನಾಮಹಾಭಾಗಿಯ ಪುರೋಭಾಗದೊಳ್ ನಿಲಿಸಿ, "ಇದನೇರಲ್ ಚಿತ್ತೈಪ್ಪುದು" ಎನಲಾ ಮನುಜೇಂದ್ರನೈರಾವತಾಧಿರೂಢನಾದ ಅಮರಪರಿವೃಢನಂದದೆ ಆ ಗಂಧಗಜಮನಡರ್ದು, ತನ್ನ ಪಿಂದೆಸೆಯೊಳ್ ಮೇರುವಂ ಪೋಲ್ವಪೊಂದೇರನೇರಿ ಪುತ್ರಕಳತ್ರನ್ಬೈತರಲ್, ಮಹಾವಿಭವಾಭಿರಾಮನುಂ ನಿಜನಗರಾಭಿಮುಖನುಮಾಗಿ ತೆರಳ್ದು, ತೋರಣದ್ವಾರದಿಂ ನಿರ್ಗಮಿಸಿ, ರಾಜಮಾರ್ಗದಿಂ ಪೊರಮಡುವೆಡೆಯೊಳ್, ಗಗನಸ್ಪೃಕ್ಸೌಧೋಪರಿತಲಂಗಳೊಳ್ ಸಾಲ್ಗೊಂಡು ನಿಟ್ಟಿಪ ಪೌರಸುಂದರಿಯರ್ ವ್ಯೋಮಯಾನಂಗಳತ್ತಣಿಂ ನೋಳ್ಪ ನಿಲಿಂಪ ಹಂಸಯಾನೆಯರಂ ಪುರುಡಿಸುತೆ, ಓರೊರ್ವರಂ ಆರ್ದ್ರಾರ್ದ್ರಾಡುವ ಬಿನದಂಗಳಿಂ ಕಲಕಲಮೆಸಗೆ, "ಎಲೌ! ಕಲಭಾಷಿಣಿ, ಆವ ಕುಭೃಚ್ಛಿರೋಮಣಿ ಚಲವಿಡಿದು ಕಾಡಿದ ಗಾಧಿಪುತ್ರನ ಮಾಯೆಗೆ ಸಿಲ್ಕದುಳಿದಂ; ಆವ ಸಾರ್ವಭೌಮನಾಸುಪರ್ವರ್ಗಂ ಸಲ್ಲದ ಸೂನೃತವ್ರತಮನಾಚರಿಸುವ ಕತದಿಂ ಸತೀಸುತರಂ ಮಾರಿ, ತಾನುಮೊರ್ವ ನೀಚಂಗೆ ತೊಳ್ತಾದಂ; ಆವರಸಂ ರಾಜರಾಜ ದೇವರಾಜತನೂಜರಂ ಸೌಂದರ್ಯದೊಳಂ, ಸುರತರುಶಶಧರಾಂಬುಧರಂಗಳನೌದಾರ್ಯದೊಳಂ, ಪಂಚಮುಖಷಣ್ಮುಖ ಪ್ರಮುಖರಂ ಶೌರ್ಯದೊಳಂ ಜಯಿಸಬಲ್ಲಂ; ಅಂತಹ ಮನುಕುಲಕಲಶವಾರಾಶಿಚಂದ್ರನಾ ಹರಿಶ್ಚಂದ್ರನೆ ಭದ್ರ

ಮೂರ್ತಿಯಾಗಿ, ಭದ್ರದಂತಾವಳಮನಡರ್ದು, ಎಮ್ಮ ಕಣ್ಗಳ್ಗೆ ಹಬ್ಬ ಮನೆಸಗುತ್ತೆ, ಬಿಜಯಂಗೆಯ್ಯುತಿರ್ಪಂ. ಎಲೆ ಅಮ್ಮ! ಅದೇನಚ್ಚರಿಯೆ! ಅತ್ತಲಾ ಪೊಂದೇರನೇರಿ ಬರ್ಪ ಪೊನ್ಗೊಂಬೆಯಂ ನೋಡಿರೆ! ಪತಿದೇವತೆಯರಪ್ಪ ಸತಿಯರ್ಗಿದುವೆ ತಕ್ಕುದೆನುತೆ ಅರಿಪುವಳೊ ಎನಲೀ ಉಡುರಾಜವದನೆ ಕೌಶಿಕಪ್ರಕಲ್ಪಿತವಾಯಾಪಯೋರಾಶಿಯಂ ದಾಂಟಲನಲನಂ ಪೊಕ್ಕಳಂತೆ! ಇಂತಹ ಕುಲಪಾಲಿಕೆಯರೆತ್ತಲಿರ್ಪರೆ? ಈ ಸ್ತ್ರೀಪಾತಿವ್ರತ್ಯದೈಸಿರಿಯಿನನುಪಮಾನಯಶಶ್ಚಂದ್ರಮತಿಯಾಗಿ ಚಂದ್ರಮತ್ಯಾಖ್ಯೆಯಿಂ ನೆಗಳ್ದಿರ್ಪಳ್. ಮೇಣೀಚೆನ್ನಿಗೆ ತಾಂ ನೋಂತ ನೋಂಪಿಗಳ ಬೆಳಸೆನೆ ಮುಂದಿರ್ಪಣುಗನಂ ಕಂಡಿರೆ? ಈ ಚೆಲ್ವನನೊಂದು ಪಾವು ಕಡಿಯಲಳಿದುಳಿದನಂತೆ! ಇಂತು ಸುಗುಣಗಣಾಲಂಕೃತರಪ್ಪ ನಿತ್ಯಸತ್ಯವರ್ಧಿಷ್ಣುಗಳ್ಗೆ ಇಂತಹ ವೈಭವಂ ಸಮನಿಸೆ ಕಣ್ಣಾರೆ ಕಂಡ ಎಮ್ಮ ಭಾಗ್ಯಮೆಂತುಟೆ!" ಎನುತೆ ಸರಸಮನಾಡಿದರ್. ವಾರಾಂಗನೆಯರ್ ನೃತ್ಯಗೀತಾದಿಗಳಿನೆಸೆದಿರ್ದರ್. ವಂದಿಮಾಗಧ ಬೃಂದಂಗಳಭಿನಂದಿಸಿದರ್. ಪುಣ್ಯಾಂಗನಾಜನವಿಕ್ಷಿಪ್ತ ಮಂಗಳಾಕ್ಷತೆಗಳ್ ಸುರಗಣಪ್ರವರ್ಷಿತ ಕಲ್ಪಕಪ್ರಸೂನಂಗಳವೊಲುದಿರ್ದುವು. ಪಟಹಭೇರೀಮೃದಂಗಾದಿ ಮಂಗಳವಾದ್ಯ ಧ್ವನಿಗಳುಂ, ದೇವದುಂದುಭಿಧ್ವಾನಂಗಳುಂ, ಭೂನಭೋಂತರಂಗದೊಳ್ ಮಸಗಿದುವು. ಧರಾಮರರುಂ ಸ್ರಕ್ಪಲ್ಲವಾಭಿಶೋಭಿತ ಮಹಾರಜತಗಳಂತಿಕಾಕಲಿತ ಹಸ್ತರಾಗಿ, ಸ್ವಸ್ತಿವಾಚನಂಗಳಂ ಪಠಿಸುತಿದಿರ್ಗೊಂಡರ್ ಅನಿತರೊಳಾ ಹಂಸಕುಲವತಂಸಂ ಭೂಸುರಸುವಾಸಿನಿಯರ್ ಬಜ್ಜರದ ಪರಿಯಣಂಗಳೊಳ್ ಬೆಳಗುವ ಕಪ್ಪುರದಾರತಿಗಳನಂಗೀಕರಿಸುತೆ, ಮೊಗಸಾಲೆಯೊಳೊಯ್ಯನೆ ಭದ್ರಕರಿಯನಿಳಿದು, ಹರಿಕಾರರ್

ಉಗ್ಗಡಿಸುತೆ ಗಧಾವಣೆಗಳಂ ಛಡಾಳಿಸುತಿರೆ, ಆಸ್ಥಾನ ಮಂಟಪಮಂ ಪೊಕ್ಕು, ಭದ್ರಸಿಂಹಾಸನಮನಡರ್ದಂ.

ಆಗಳ್ ಕೌಶಿಕಂ ತನ್ನೆರ್ದೆಯೊಳ್ ತುಂಬಿರ್ದಮರ್ಷಾನಲನಂ ಭರಿಸಲಾಗದೆ ಪೊರಗುಗುಳೆ ಪಿಂಡಾಕೃತಿಯಿಂ ಬೀಳ್ವುದೊ, ಎನಲರುಣಕಿರಣ ಮಂಡಲಂ ಪಡುವಣ ಕಡಲೊಳಡಂಗಿದುದು. ಹರಿಶ್ಚಂದ್ರಸಾರ್ವಭೌಮಂ ಸರ್ವಂಸಹಾಭಾರಮಂ ನಿರ್ವಹಿಸಿದುದರಿಂ ತನಗೆ ಪದುಳನೊದವಿದುದೆನುತೆ, ಆ ಮಹಿಪನಂ ಕಾಣಲೈತರ್ಪ ಇಳೆದಳೆದಹಿಪನ ಪೆಡೆಗಳಿಂದುದಿರ್ವ ಮಣಿಗಣಸಂತಾನಮೊ, ಎನೆ ಸಂಧ್ಯಾರಾಗಮೊದವಿದುದು. ಕುಲಾಯಂಗಳಂ ಸಾರ್ವ ಪಕ್ಕಿಗಳ ಕಲಕಲಂಗಳ್ ದೆಸೆದೀವಿದುವು. ಒಕ್ಕಲಿಗರ್ ಊರುದಾರಿ ತೋರಲ್ ತಮ್ಮೆಳೆಗರುಗಳಂ ನೆನೆದು, ಕೆಚ್ಚಲ್ಗಳ್ ತೊರೆಯುಲೋಡಿಬರ್ಪೇಳೆಗಂದಿ ಗೊಂದಣದಂಭಾರವಂಗಳ್ ಮಸಗಿದುವು. ಸತ್ಯಸಂಧನಾದ ಹರಿಶ್ಚಂದ್ರನಂ ಕುಂದಿಸಿ ಪಡೆದ ಕೌಶಿಕನಪಯಶಮೊ, ಎನಲಿರುಳೆಲ್ಲ ದೆಸೆಗಳೊಳಂ ಪರ್ಬಿದುದು. ಗಾಧಿನಂದನಮಂಥಾನಮಥ್ಯಮಾನಮಾನವಾಧಿಪ ಮನಃಪಯೋನಿಧಾನಸಂಜಾತಸತ್ಯಸ್ಫುರತ್ಸುಧಾಬಿಂದುಸಂದೋಹಮೆನೆ, ತಾರಕಾನೀಕಮಾಗಸದೊಳ್ಮೆರೆದುದು. ಗಾಧೇಯಕೃತಬಾಧಾಶತಾನುಭೂತಿಯಿಂ ಕುಂದದ ಕಮಲಾಪ್ತ ಕುಲತಿಲಕನಮಲಯಶಮೊ, ಎನಲಿಂದೀವರಬಂಧು ಉದಯಿಸೆ ಚಂದ್ರಿಕಾನಿಕರಂ ಸಾಂದ್ರತರಮಾಗಿ ವಿರಾಜಿಸಿದುದು.

ಆಗಳಾ ಹರಿಶ್ಚಂದ್ರಂ, ತನ್ನಂ ಕಾಣಲೈತಂದ ಪೌರಜಾನಪದಸಮುದಯಮಂ ಮುದದೆ ತತ್ತತ್ಸದನಂಗಳ್ಗೆ ಬೀಳ್ಕೊಟ್ಟು, ಸುಯಜ್ಞನಾಜ್ಞೆಯಿಂ ಬಾಣಸವನೆಯೊಳ್ ಸನ್ನಿಸಿದ ಪಂಚಭಕ್ಷ್ಯ ಪರ

ಮಾನ್ನಂಗಳಿಂದೊಪ್ಪಿದ ವೈಷ್ಟಾನ್ನಮಂ ಕಾಶಿರಾಜಪ್ರಮುಖಾಪ್ತರಿನೊಡಗೂಡಿ ಆರೋಗಿಸಿ, ಸಮುಚಿತೋಚಿತವಸ್ತು ಪ್ರಶಸ್ತವಾಗಿಕಂಗೊಳಿಪ ಶಯನಾಗಾರಮಂ ಪೊಕ್ಕು, ಸಮಯಸಮುಚಿತ ಪರಿಚಾರಿಕಾಕೃತೋಪಚಾರಂಗಳನಂಗೀಕರಿಸುತೆ, ಹಂಸತೂಲಿಕಾತಲ್ಪದೊಳ್ ಶಯನಿಸಿ, ಅನಲ್ಪತರ ಸುಖಭಾಜನನಾಗುತೆ ನಿದ್ದೆಗೆಯ್ದಂ. ಕಾಶಿರಾಜಪ್ರಭೃತಿ ನೃಪತಿಗಳೆಲ್ಲರುಂ ಸುಯಜ್ಞ ಪ್ರದರ್ಶಿತೋದವಸಿತಶಯ್ಯಾತಲಂಗಳೊಳ್ ಪ್ರಸುಪ್ತರಾದರ್.

ಅನಿತರೊಳೆ ಸುಪ್ರಭಾತವಾಗೆ 'ಕುಕ್ಕೂ, ಕೂ!' ಎಂಬ ಕುಕ್ಕುಟಾರವಂಗಳುಂ, ವೈತಾಳಿಕರ ಮಂಗಳ ಪಾಠಂಗಳುಂ, ವಂದಿಮಾಗಧಬೃಂದಾಭಿನಂದಿತಾರಾವಂಗಳುಂ, ತೂರ್ಯನಿರಾವಂಗಳುಂ ಕಿವಿವುಗೆ, ಮಂಗಳ ದೇವತೆಯಂ ಪೋಲ್ದ ನಿಜಾಂಗನೆ ಮುನ್ನಮೆ ಎಳ್ಚತ್ತು, ಸಮುಚಿತ ನಿರ್ವರ್ತಿತ ಕಾಲ್ಯಕೃತ್ಯಳಾಗಿ, ಇದಿರೊಳ್ನಿಲಲಾ ನಲ್ಲಳ ಸುಪ್ರಸನ್ನಾನನಮಂ ನಿಟ್ಟಿಸುತೆ, ತ್ರೈಶಂಕವನೆಳ್ದು ಸೆಜ್ಜೆವನೆಯಿಂ ಪೊರಮಟ್ಟು, ಅಸವಸದೆ ಮುಖಮಜ್ಜನಾದಿ ಸವಳ್ತಡೆಯುಜ್ಜುಗಂಗಳಂ ಸಜ್ಜುಗೊಳುತುಜ್ಜುಗಿಸಿ, ಗೃಹದೇವತಾ ಪ್ರಾರ್ಥನೆಯಂ ಗೆಯ್ದು, ಗುರುಜನಂಗಳನರ್ಚಿಸಿ, ವಸ್ತ್ರಮಾಲ್ಯಾಭರಣಾಲಂಕೃತನಾಗಿ, ತನುತ್ರಾಣ ಶಿರಸ್ತ್ರಾಣಂಗಳಂ ತೊಟ್ಟು, ಮಿಸುನಿಮೆಟ್ಟುಗಳಂ ಮೆಟ್ಟಿ, ಅಡಪವಳರ್ ತವಲಾಯಂಗಳಂ ನೀಡುತೆ ಅಡಪಮಂ ಪಡಿಗಮುಮಂ ಕೊಂಡು ಮುಂದೆ ನಡೆಯೆ, ಪೆಗ್ಗಡೆಯರ್ ಪಟ್ಟದಸಿಗಳಂ ಕೈವಿಡಿದು ಪಲತೆರದೆ 'ದಿನಕರಕುಲಮಣೀ! ವೈಭವಾಧಃಕೃತ ವಿಬುಧಮಣೀ! ಸುವಿಲಂಘಿತಗಾಧೇಯಮಾಯಾಪಯೋನಿಧಾನಾ! ಸೂನೃತವಾಣೀನಿಧಾನಾ! ದೃಪ್ತಾರಿವೀರಮಾರಣಕ್ರಿಯಾಸಮವರ್ತೀ! ದಶದಿಶಾವಿಶದೀಕೃತಾತಿಸ್ವಚ್ಛ

ಕೀರ್ತೀ! ಹರಿಶ್ಚಂದ್ರಚಕ್ರವರ್ತೀ!' ಎಂದು ಪೊಗಳುತಿರೆ, ಕರ ಕಂಕಣಮಣಿದ್ಯುತಿ ತ್ರೇನತೇನಂ ನಿವ್ವಾಳಿಸುವ ಆರತಿಗಳೆನೆ, ಕೆಲಬ ರಳಿನೀಳಾಳಕೆಯರೆಡೆವಿಡದೆ ಚಾಮರಂಗಳಂ ಬೀಸೆ, ಮಹಾವೈಭವ ದಿಂದಂತಃಪುರದಿಂ ತೆರಳ್ದು, ಬಜ್ಜರದ ಕಳಿಕಳೆಗಳುಂ, ಕೆಂಪುಗಳ ಥಾಳಥಳ್ಯಮುಮೆಸೆಯೆ, ಮಣಿಮಯಮಾಗಿಯೊಪ್ಪುತಿರ್ಪ ಓಲಗ ಸಾಲೆಗೈತಂದು, ಅದಕೆ ಮುನ್ನಮೆ ಅಲ್ಲಿಗೈತಂದ ಸುಯಜ್ಞಂ ತನ್ನ ನೀಕ್ಷಿಸಿ, ಪ್ರತ್ಯುತ್ಥಾನಮಂ ಗೆಯ್ಯಲಾತನಂ ಸಮುಚಿತಾಸನಾಸೀ ನನಂ ಗೆಯ್ದು, ಸಾಮ್ರಾಜ್ಯವೈಭವಾಧಿಷ್ಠಾನಘನಮಾದ ಭದ್ರಾಸನ ದೊಳ್ ಕುಳ್ಳಿರ್ದು, ಮಂತ್ರಿ ಸಾಮಂತ ಸೇನಾಪತಿ ದಂಡನಾಯಕ ಪ್ರಮುಖ ನಿಖಿಲ ನಿಯೋಗವರ್ಗಮುಂ, ವಿದ್ವತ್ಕವಿಗಾಯಕಾ ದ್ಯನುಜೀವಿವರ್ಗಮುಂ ಮೇಳೈಸಿ ಪರಿವೇಷ್ಟಿತರಾಗಿ ಓಲಗಿಸೆ, ಪೇರೋಲಗಂಗೊಟ್ಟು, "ಜೀಯಾ, ಅಂದಿನೊಳ್ ಬೇಂಟೆಯಾಟಕೆ ಪೋದ ಸಮಯದೊಳ್ಕಂಡ ನಿಮ್ಮ ರೂಪಮನೀಗಳಲ್ತೆ ಕಾಣ ಲಾದೆಂ! ನಿಮ್ಮಂದದಾಣ್ಮನಂ ತೊರೆದು, ಏಕಾಕಿಯಾಗಿರ್ದೆನ್ನೆಡ ನೀಗಿದುದು. ಧನ್ಯೋಽಸ್ಮಿಯೆಂದೆಂ" ಎಂದು ತನ್ನ ಆರ್ತಿಯನರಿಪಿ ಮಿಗೆ ಬಿನ್ನೈಸುತಿರ್ಪ ಸತ್ಯಕೀರ್ತಿಯನಾದರಿಸಿ, ತನ್ನಿದಿರೊಳೆ ಕುಳಿತಿರಲ್ ಬೆಸಸಿ, "ದಯಾಮೂರ್ತಿಯಪ್ಪ ಕೌಶಿಕಮುನಿ ಎನ್ನಂ ಕಾಡಿದನೆಂದು ದೂರುವುದುಚಿತಮಲ್ತು. ಪುರಾಕೃತ ದುಷ್ಕೃತ ಮನನುಭವಿಸದಲ್ಲದೆ ಮಾಣದು. ಅದರಿಂ ಮರುಗಲೇಕೆ? ಖೇ ದಾಮೋದಂಗಳೆಡೆಯೊಳ್ ಚಿಂತಾಸಂತೋಷಂಗಳನೊಂದುವುದು ಪಾಮರರ ಧರ್ಮಮಲ್ಲದೆ ಮೇಣೊಂದಲ್ಲಂ. ಗಾಧೇಯನೆಮ್ಮ ಕೆನ್ನೆಯುಂ ತಟ್ಟಿ ಪಾಲ್ಕುಡಿಸಿದನೆಂಬುದನೆನ್ನೆಗಂ ಮರೆಯಬೇಡೈ" ಎಂದು ಪೇಳ್ದು ಆತನಂ ಸಂತವಿಸಿ, ತನಗೆ ಕೌಶಿಕಂ ಬರೆದಿತ್ತ

ನಿರೂಪಮಂ ಬಿಚ್ಚಿ, ಸುಯಜ್ಞನಿದಿರೊಳಿರಿಸಿದಂ. ಆ ಪ್ರಾಜ್ಞನದನ ತಿಭಕ್ತಿಯಿಂದೆತ್ತಿ ಕಣ್ಗಳ್ಗೊತ್ತಿಕೊಂಡು, ಚಿತ್ತದೊಳ್ ಸಂತಸವೊ ದವಲೋದಿ "ರಾಜೇಂದ್ರ, ಈ ರಾಯಸಮಂ ನೋಡುವುದಕೆ ಮುನ್ನಮೆ ಕರ್ತವ್ಯಂಗಳೆಲ್ಲಮೆನ್ನ ಗುರುವಿನತ್ತಣಿಂದೆನಗೆ ತಿಳಿಯು ಲಾದುದು. ಇದೆ! ನಿಮ್ಮಾಯ ಸರ್ವಸ್ವಮಂ ಒಪ್ಪಿಸುವೆಂ. ತಪ್ಪಿ ರ್ದೊಡೆ ಮನ್ನಿಸುತೊಪ್ಪುಗೈವುದು. ಎನ್ಮೊದೆತನದೊಳ್ ಕಂಡಾ ಯವ್ಯಯಂಗಳ ಲೆಕ್ಕವಿಾವೋಲೆಯೊಳ್ ಬರೆದಿರ್ಪುದು. ಇದಂ ಪರಿಶೀಲಿಪುದು" ಎನುತೆ ಓಲೆಯಂ ಬಿಚ್ಚಿ ಇಂತೋದಲ್ ತೊಡ ಗಿದಂ—"ದೇವದಾಯ, ಬ್ರಹ್ಮದಾಯ, ಭಟ್ಟವೃತ್ತಿ, ಚಕ್ರಮಾನ್ಯ, ಅಗ್ರಹಾರಂಗಳಂ ಕಳೆದುಳಿದ ಧಾನ್ಯಧನಾಯಂಗಳಂ ಸೇರ್ದ ವರ ಹಂಗಳ್ ನೂರು ಕೋಟಿ. ಸಾಮಂತರ ಪೊಗುದಿಮುಡುಪುಗಳ ಆದಾಯ ಮುನ್ನೂರು ಕೋಟಿ. ಒಕ್ಕಲಿಗರುಂ ಕರಣಿಕರುಮೀವ ಕಾಣಿಕೆಗಳ ರೊಕ್ಕಮಿರ್ಪತ್ತು ಕೋಟಿ. ಇದರೊಳ್ ವಿಷ್ಣುಶಿ ವಾಲಯಂಗಳ ಉಂಬಳಿಗಳ್ಗೆಯುಂ, ಅನ್ನಸತ್ರಂಗಳ್ಗೆಯುಂ, ವರ್ಷಾ ಶನಂಗಳ್ಗೆಯುಂ, ಕ್ರತುಹೋಮಾದಿ ವೈದಿಕ ಕ್ರಿಯೆಗಳ್ಗೆಯುಂ, ಗಜಹಯಾದಿಗಳ ಪೋಷಣೆಗಂ, ಆಪ್ತಗುಪ್ತವರ್ತನಂಗಳ್ಗುಮಾದ ವ್ಯಯಂ ಪತ್ತು ಕೋಟಿ" ಎಂದೋದಿ, "ಇದನುಳಿದು ಮುನ್ನಿನ ನಿಮ್ಮ ಬೊಕ್ಕಸದೊಳೊಂದು ಕಾಸಾದೊಡಂ ವೆಚ್ಚಮಾಗದು. ತಪ್ಪೊಪ್ಪು ಗಳನಾರಯ್ದು ಸರ್ವಮಂ ನೋಡಿಕೊಳ್ವುದು. ಆಂ ಪರಮವೈದಿ ಕನದರಿಂದೆನ್ನಿಂದಾಚರಿತಮಾದ ರಾಜಕಾರ್ಯಂ ಪರ್ಯಾಯಮಾ ಗಿರ್ಪುದಲ್ಲದೆ ಮಾನಿತಮಾಗಿರಲಾರದು. ಆವ ವಿಷಯದೊಳಾವ ಲೋಪಮಿರ್ದೊಡಂ ಸಮಂಗೊಳಿಸಿ ಕ್ಷಮಿಸಿಕೊಳ್ವುದು" ಎನುತೆ ಸರ್ವಮನಾ ಉರ್ವೀಶಂಗೊಪ್ಪಿಸಿದಂ. ಅರಸನುಂ ಸಮಸ್ತಂ ಸುಪ್ರಶ

ಸ್ತಮೆನುತಪ್ಪುಗೆಯ್ದು ಗುರುಸೇವಾರ್ಥವಾಗಿ ಪೊರಮಡುವ ಸುಯಜ್ಞನಂ ಪೂಜಿಸಿ, "ವಿಪ್ರವರ್ಯ್ಯ, ನೀಂ ನಿಮ್ಮ ಗುರುಸೇವೆಗೆ ಪೋಗುವುದವಶ್ಯಕಾರ್ಯವಾದೊಡೆಯುಮಿನಿತು ದಿನಮಿರ್ದಂತೆ, ಇನ್ನುಂ ಕೆಲದಿನಮಿಲ್ಲಿರ್ದೆನ್ನನೆನ್ನಯ ರಾಜ್ಯಮುಂ ಪಾಲಿಪಂತೆಸಗಲ್ ಚಿತ್ತೈಸುವುದು" ಎನಲಾಸುಯಜ್ಞಂ "ಭೂಪ, ರೀತಿನೀತಿಗಳನರಿಯದ ಅಸಂಗತನುಂ, ಪರಮವೈದಿಕನುಮಾದೆನ್ನಂ ಕ್ರತುಹೋಮಾದಿವೈದಿಕಕರ್ಮಾಚರಣದೊಳಂ, ಪರತತ್ವಪ್ರಕಟನಾನುಕರಣದೊಳಂ, ಜಪತಪಸ್ಸ್ವಾಧ್ಯಾಯ ಪ್ರವರ್ತನದೊಳಂ, ಹರಿನಾಮಸಂಕೀರ್ತನೆಯೊಳಂ ಅನುವರ್ತಿಸೆನ್ನದೆ, ಪ್ರಕೃತಿಜನರಂಜನ ಪ್ರಕೃತಿಗಳಾದ ನೃಪತಿಗಳ್ಗೆ ಸಮನಪ್ಪ ಸಾಮ್ರಾಜ್ಯಭರಣದಿಂ ತಳ್ವುದೆಂಬುದುಚಿತಮಪ್ಪುದೇಂ? ಬೇಳ್ಕುಮೆಂದೊಡೆ ಕೆಲವಗಲ್ ನಿನ್ನನಾಶ್ರಯಿಸಿ ವರ್ತಿಸಲೆನಗುಮಿಚ್ಚೆಯಿರ್ಪುದು. ಅದರಿಂ ನಿಲ್ವೆಂ" ಎನಲಾಲಿಸಿ, ಆ ಅವನೀಧವಂ "ತಪೋಧನಾ, ನಿಮ್ಮಯ ಮನಮೆಂತಿರ್ದೊಡಂ ತೆನ್ನ ಮನೆಯೊಳ್ ಕೆಲವಗಲಿರ್ದೆನ್ನಂ ಧನ್ಯನಂ ಮಾಳ್ಪುದೆಂದು ನೊಲ್ಲಿಸಿ ನಿಲ್ಲಿಸಿದಂ.

ಆಗಳಾ ಅರಮನೆಯೂಳಿಗದವರ್ ಮೊದಲಪ್ಪ ಪೌರರ್ ಭೂವಲ್ಲಭನ ಸನ್ನಿಧಿಗೈತಂದಲ್ಲಿ ಸನ್ನಿಹಿತನಾಗಿರ್ಪ ಸುಯಜ್ಞನಂ ನಿಟ್ಟಿಸಿ, ಸಾಷ್ಟಾಂಗ ಪ್ರಣಾಮಮನಾಚರಿಸಿ, ಬಳಿಕ್ಕೆ ಪೊಡವಿಯೊಡೆಯನಡಿಗೆ ಪೊಡಮಟ್ಟು, "ಜೀಯಾ, ಇನಾಲೋಕನಮಿಲ್ಲದ ದಿನದವೋಲ್ ನಿಮ್ಮ ಕಟಾಕ್ಷವೀಕ್ಷಣಮಿಲ್ಲದುದರಿಂ ಪತಿಯುಂ ತೊರೆದ ಸತಿಯುರುಂ, ಜನನಿಯುಂ ತೊರೆದ ತನಯರುಂ, ಎಂತಿರ್ಪರಂತಲೆಯುತ್ತೆ, ಪದುಳಮಿಲ್ಲದೆ ಈ ಪಾರ್ವನ ಬಾಗಿಗೆ ಬೀಳ್ದು ತಾಳಲಾರದೆಡಗೊಳಪಟ್ಟು, ಗೋಳಿಡುವೆಮ್ಮ ಬಾಳನೇನೆಂದಪೆವು?

ರೀತಿನೀತಿಗಳನರಿಯದ ಈ ಭೂದೇವಂ ದೇವತಾಮಹೋತ್ಸವಂಗಳ್ಗೆಂದುಂ, ಬ್ರಾಹ್ಮಣಸಂತರ್ಪಣಂಗಳ್ಗೆಂದುಂ, ಯಾಗಾದಿ ವೈದಿಕಕ್ರಿಯೆಗಳ್ಗೆಂದುಂ, ಬಿಟ್ಟಿವಿಡಿದು ಪೊರಿಸಿದ ಪೊರೆಗಳಂ ಪೊತ್ತುಪೊತ್ತೆಮ್ಮ ಪೆಗಲ್ಗಳ್ ಜಡ್ಡುಕಟ್ಟಿರ್ಪುವು; ಇದೆ ನಿಟ್ಟಸ್ಯೆ! ಈ ಎಡರ್ಗಳಂ ಕಳೆದು ಬಿಡಲೆತ್ತಲುಂ ತಣ್ಪೆಸಗುವ ನಿಮ್ಮ ಕಡೆಗಣ್ಣ ನೋಟಂಗಳೆಮ್ಮ ಮೇಲ್ಬೀಳ್ವುದಮಿಂದು ಕಾಣಲಾಗಿ, ಮೇಲ್ ಮಿಗೆ ಬಾಳ್ದೆವು" ಎಂದು ಸಲುಗೆ ಮಿಗೆ ತಮ್ಮ ಮನಸ್ತಾಪಂಗಳನರಿಪುವಂತೆ ಬಿನ್ನೈಸುವಾ ಪುರಜನರ ಬಿನ್ನಪಂಗಳಂ ಬೂಟಕಂಗಳೆನ್ನದೆ ಕಿವಿಗೊಟ್ಟಾಲಿಸಿ, ಮನದೊಳ್ ಕನಿಕರಂ ತೀವಿ, ಮೆರೆವ ಮೊಗದೊಳ್ಮುಗುಳ್ನಗೆಯೊಗೆಯೆ, "ನಾಗರರ್ಕಳಿರ, ನೀವೀಪ್ರಾಜ್ಞನಾಜ್ಞೆಯಂ ಶಿರಸಾವಹಿಸಿ, ಭಾರವಹನಾದಿ ಕೃತ್ಯಂಗಳೊಳ್ ಅಪ್ರಮತ್ತರೆನಿಸಿ ವರ್ತಿಸಿದುದರಿಂ ಧನ್ಯರಾದಿರ್. ಅದು ಸುಕೃತಸಂಪಾದಕಮದರಿನಿನ್ನೇನುಮನಿಲ್ಲಿ ಪ್ರಕಟಿಸದೆ, ಏಕಮನಸ್ಕರಾಗಿ ನಿಮ್ಮ ನಿಲಯಂಗಳ್ಗೆಯ್ದುವುದೆನುತವರ್ಗುಚಿತ ಪಾರಿತೋಷಿಕಂಗಳಾಗಿ ಜಾಂಬೂನದಾಂಬರಾಭರಣಂಗಳುಮಂ, ತಾಂಬೂಲಂಗಳುಮನಿತ್ತು ಬೀಳ್ಕೊಟ್ಟಂ. ಅವರಾಚಂಡಕರಕುಲಜನ ಸಹನದೈಸಿರಿಗುಂ, ಆ ಮಹೀಪತಿ ತಮಗಿತ್ತಾಸರೆಗುಂ, ಅವರವರ ಮನದೆ ಮೆಚ್ಚುತೆ ಆತ್ಮನಿಲಯಂಗಳನೆಯ್ದಿದರ್.

ಅನಂತರಮಾಚಕ್ರವರ್ತಿ ಚಕ್ರಧರನನುಗ್ರಹದೆ ಚಕ್ರಂ ಕಜ್ಜಮೆಸಗೆ ಸರ್ವ ಸರ್ವಂಸಹಾಧೂರ್ವಹನಾಗಿ, ಸಕಲನರವರಕೋಟೀರಘಟಿತಮಣಿಪ್ರಕರಾಲಂಕೃತ ಚರಣಯುಗಳನಾಗಿ, ಯಥಾಪೂರ್ವಮಾಗಿ ಪ್ರಜಾಪರಿಪಾಲನಂ ಗೆಯ್ಯುತ್ತಿರ್ದಂ.

ಅಂತಹ ಸಮಯದೊಳೊರ್ವಗಲಪರಪರಮೇಷ್ಠಿಯಪ್ಪ ವಸಿ

ಷ್ಠನಾರಾಜಶ್ರೇಷ್ಠನಂ ಕಾಣಲೈತರಲವನಾಮುನಿವರಿಷ್ಠನಂ ಕಂಡು, ತವಕದೆ ಗದ್ದುಗೆಯನಿಳಿದು, ಪ್ರೀತಿಮಿಗಲಿದಿರ್ಗೊಂಡು, ಯಥಾ ವಿಧಿಯಾಗಿ ಅಧಿಕ ಭಕ್ತಿಯಿಂದರ್ಚಿಸಿ, ಸಮುಚಿತಾಸನಾಸೀನನಂ ಗೆಯ್ದು, ತದೀಯ ಪದಪಲ್ಲವಂಗಳ್ ನಿಜವದನಮಂ ಸೋಂಕಲೆರಗಿ, ನಯಭಯಂಗಳ್ ಮಿಗೆ ಮೆಲ್ಲನೆ, "ಗುರುವರ, ಕುಶಲಮೆ?" ಎನ ಲಾಮುನೀಂದ್ರಂ ವಿಕಾಸಭಾಸುರಮುಖಾರವಿಂದನಾಗುತಾಶೀರ್ವ ದಿಸಿ, "ಅಚಿಂತ್ಯಾಚಾರಪಾರವಶ್ಯದೆ ಮೆರೆವ ನಿನ್ನಂದದ ಸಚ್ಛಿಷ್ಯ ನಿರೆ, ಎಮ್ಮ ಕುಶಲಕಿನಿಸಾದೊಡಂ ಕೊರತೆಯುಂಟೆ? ಸತ್ಯಪ್ರತಿ ಪಾಲನದೆ ಸುಸ್ಥಿರನೆನಿಸಿ ವಿಶ್ವವ್ಯಾಪಕನಪ್ಪ ವಿಶ್ವಾಮಿತ್ರನಂ ಮೆಚ್ಚಿ ಸಿದೈ! ಎನ್ನ ಪಂತಮಂ ಗೆಲ್ಲಿಸಿದೈ! ಅದರಿಂದೆನ್ನಯ ತಪಂ ಫಲಿಸಿದುದು. ಧನ್ಯತಮನಾದೆನಾಂ! ಅಸಾಮಾನ್ಯಗಣ್ಯನುಂ, ಅಖಿ ಲಲೋಕಮಾನ್ಯನುಮಾದ ಆತನ ಮೆಚ್ಚಿಕೆಯನಾಂಪುದದು ಸಾ ಮಾನ್ಯಮಲ್ತು. ನೀಂ ದಿಗಂತವಿಶ್ರಾಂತಯಶಸ್ಕನಾಗುವುದರ್ಕಾ ಮುನಿಚಂದ್ರನ ಶಪಥಮೆ ಮೂಲಕಂದಮಾದುದು" ಎಂದು ಪೇಳ್ದ ಗುರುವಾಕ್ಯಮಂ ಕಡು ವಿನಯದಿಂದಪ್ಪುಗೆಯ್ದು, "ನೀವಾಣ ತಿಸಿದಂದದೆ ಗಾಧಿನಂದನನೆನಗೇಳ್ತೆರದ ಕಾಪಿಗನಹುದು. ವಿಧೇ ಯಾಭೀಷ್ಟದಾಯಕನಪ್ಪ ಆತನ ಪರಿಗ್ರಹದಿಂದೆಯುಂ, ನಿಮ್ಮನು ಗ್ರಹದಿಂದೆಯುಮಾಂ ಪದುಳಮನಾಂತೆಂ" ಎನುತೆ ಬಿನ್ನೈಸುವನಿ ತರೊಳೆ ಆತನ ವನಿತೆ ಚಂದ್ರಮತಿ ಮಂಥರಗತಿಯಿಂದೈತಂದಾ ಗುರುವಿನಡಿಗೆರಗಿ, ಕಾದಲನ ಪಿಂತವಿದು ನಿಂದಿರ್ದಳ್. ಬಳಿಕಮ ರುಂಧತೀಪತಿಯಾಸತಿಯಂ ಘಯಜ್ಞ ಪ್ರಾಜ್ಞಂಗೆ ತೋರಿ, "ತಾಪ ಸೋತ್ತಮ, ಈ ಪೆಣ್ಣಸುಳಿಯ ತಾಳ್ಮೆಯೆಂಬ ಸಿರಿ ಪಂಚಮಹಾ ಯಜ್ಞಪರರಾಗೊಪ್ಪುವ ಧರ್ಮಜ್ಞರನದಿರಿಸಿದತ್ತು. ಈಕೆಯ

ಪಾತಿವ್ರತ್ಯಪ್ರಭಾವಮನೆಣಿಸಲಾ ಚತುರಾನನಂಗಮುಳವಲ್ತು. ಅದೆಗಡಾ! ಈ ನರೇಂದ್ರಂಗೆ ಆಪಾದಿಸಿದ ಆಪಜ್ಜಲಧಿಗೆ ತರಿಯಾಗಿ ಕರೆಯನೊಂದಿಸಿತು!" ಎನಲಾವಿಶ್ವಾಮಿತ್ರಶಿಷ್ಯಂ "ಈ ದಂಪತಿಗಳಿಂತಹ ಮೈಮೆಗಾಸ್ಪದರಾಗುವುದರ್ಕೆ ಮೂಲಂ ನಿಮ್ಮ ಪದಾವಲಂಬನಮೆ ಗಡ! ನಿಮ್ಮ ಪದಸೇವಾತರಣಿಯಂ ಪೊರ್ದಿದ ಸದಮಲಚಿತ್ತರ್ಗೆ ಕೌಶಿಕಮಾಯಾಂಬುರಾಶಿಯಂ ತರಿಸುವುದೇನರಿದೆ? ಅದಂತಿರ್ಕೆ. ಈ ಹದಿಬದೆಯ ಗಳದೊಳ್ ನೇಲ್ವ ಮಂಗಳಸೂತ್ರಂ ಪ್ರಾಣೇಶ್ವರಂಗಲ್ಲದುಳಿದರ್ಗೆ ಕಾಣಲಾಗದುದಕೆ ಕಾರಣಮಾವುದು? ಸಾರ್ವಭೌಮನಂ ಕೈವಿಡಿದ ಈ ರಾಮಾಮಣಿಯಂ ಬ್ರಾಹ್ಮಣಬ್ರುವನೆನಿಸಿದ ಕಾಲಕೌಶಿಕಂ ದಾಸಿಯಾಗಿ ಕೈಕೊಂಡನೇಕೆ? ನರೇಂದ್ರದರ್ಶನದೆ ಗೊಂದಿಗಳನರಸುವ ವಾಯುಭಕ್ಷಕನಪ್ಪ ತಕ್ಷಕಂ ದಕ್ಷನಾಗಿ, ಈ ನರೇಂದ್ರನಂದನನಂ ಕಡಿದುಕೊಂದುದೆಂತು?" ಎನುತೆನ್ನಮನಂ ಶಂಕಾಸಂಕಲಿತಮಾಗಿರ್ದಪುದು. ಅದರಿಂದೆನ್ನ ಸಂದೆಗಂಗಳಂ ನೀಗಿಸಲ್ವೇಡುವೆಂ" ಎನಲಾತನುಮಾತನ ಪ್ರಜ್ಞಾವಿಶೇಷಕೆ ಮೆಚ್ಚುತಿಂತೆಂದಂ—

ಈ ಧರಾತಲದೊಳ್ ಐಸಿರಿಯ ಬಲ್ಮೆಯಿಂ ನೆಗಳ್ದ ಜ್ಯೋತಿಷ್ಮಂತನೆಂಬೊರ್ವರಸನಿರ್ದಂ. ಆತಂ ವೀರಾರಿರಾಜನ್ಯ ದೈನ್ಯಕೃಜ್ಜನ್ಯನಾಗಿ ಮಾನ್ಯಶತಮನ್ಯು ವೈಭವದೊಳ್, ಚಿರಕಾಲಂ ಭೂಭಾರಮಂ ನಿರ್ವಹಿಸಿಯುಮೆಲ್ಲಸಂಪತ್ತುಗಳ್ಗಾಸ್ಪದಮಾದ ಪುತ್ರಸಂಪದಮನೀಕ್ಷಿಸದೆ, ಲೋಕನಾಯಕನುಂ, ಸರ್ವಾಭೀಷ್ಟದಾಯಕನುಂ, ಆಶ್ರಿತಾವನಪರಾಯಣನುಂ, ಆ ನಾರಾಯಣನೆ ಎನುತಾದೇವನಂ ಮಿಗೆ ಭಕ್ತಿಯಿಂದಂತರಂಗದೊಳಿರಿಸಿ, ಚಿರಕಾಲಂ ತಪಮಾಂತು, ತದನುಗ್ರಹದೆ ಮಹಿತಗುಣಮಣಿಯೆನಿಪ್ಪೊರ್ವ

ಪುತ್ರಿಯಂ ಪಡೆದಂ. ಆಕೆ ಸಿರಿಯ ಕೆಳದಿಯಾದೊಡಮಾತ್ಮಜನಕನಂ ಭಂಗಸಂಗತನಂ ಗೆಯ್ದು ಕಮಲೆಯೊ; ವಿಮಲಗುಣರತ್ನಾಕರೆಯಾದೊಡಂ, ಶರಧಾರಾಪಾತದಿಂ ತಾರ್ವ ತನ್ನಯ ಗುರುವನಾರಯ್ಯಲಾರದ ಉಮೆಯೊ; ಅಮೃತಕಿರಣನ ಪ್ರಿಯರಮಣಿಯಾದೊಡಂ, ಜನ್ಮದಿ ಬನ್ನಮೊಂತ ತನ್ನಯ್ಯನಂ ನೂಂಕುವ ರೋಹಿಣಿಯೊ; ವಿದ್ಯಾಮಯಳಾದೊಡೆಯುಂ, ಪೆತ್ತ ಮನೆಯ ಪೆಸರಿಲ್ಲದೆ ಬಾಳ್ವ ವಾಣಿಯೊ; ಎನೆ ಸರ್ವಮೋಹಿನಿಯುಂ, ಸರ್ವಮಂಗಳೆಯುಂ, ಕಳಾವತಿಯುಂ, ಪಿತೃಕಾಂಕ್ಷಿತೆಯುಮಾಗಿಯುಂ, ಪೆತ್ತ ಮನೆಗೆ ಕೇಡಾಗಿ ದುಷ್ಟಲಗ್ನದೊಳ್ಪುಟ್ಟಿ, ಸಿರಿಯೊಳಂ ಗುಣದೊಳಂ, ಸೌಂದರ್ಯದೊಳಂ, ವಿದ್ಯಾವೈಶದ್ಯದೊಳಂ ತಾಯ್ತಂದೆಗಳ್ಗೆ ಮುದಮನೊಂದಿಸುತೆ ಗರುವಿಕೆಯಿಂ ಬಳೆಯುತಿರ್ದಳ್.

ಇಂತು ಪ್ರವರ್ಧಮಾನೆಯಪ್ಪಾ ಅರ್ಧೇಂದುನಿಟಲೆ ಪದಿನಾರನೆಯ ಬರಿಸದೊಳ್ ಆಯುರಾರೋಗ್ಯಸೌಭಾಗ್ಯಭಾಗ್ಯಂಗಳ್ ತೊಲಗೆ, ರಥರಥ್ಯವಾರಣ ಸುಭಟಸಮನ್ವಿತಮಾಗಿ, ತಾಯ್ತಂದೆಗಳ ಲಯಕೆ ಮೂಲಮಾಗಿ, ದುರ್ಮುಹೂರ್ತದೊಳ್ ನೆರೆದಳ್. ಆಗಳಾಭೂಭರ್ತಂ ಕಾರ್ತಾಂತಿಕರಂ ಬರವೇಳ್ದು, ತನ್ನ ಕುವರಿ ನೆರೆದ ಲಗ್ನಫಲಮನಾರಯಲ್ ಬೆಸಸಿದಂ. ಅವರುಂ ದಿನ ವಾರ ನಕ್ಷತ್ರ ಯೋಗ ಕರಣಂಗಳೆಂಬ ಪಂಚಾಂಗಂಗಳಂ ಪರಿಕಿಸಿ, ಲಗ್ನಶುದ್ಧಿಯಂ ವಿಮರ್ಶಿಸಿ, ತತ್ಫಲಮನರಿತು, ಕಳವಳಂಗೊಳ್ಳುತ್ತೆ, "ಇದಂ ಭೂಭರ್ತಂಗರಿಪದಿರ್ದೊಡೆ ಕೃತಘ್ನತೆಯಪ್ಪುದು" ಎನುತಾರಯ್ದು, ಅವಸರಮನರಸುತೆ ನರವರನಂ ಸಾರ್ದು, "ಜೀಯ, ನಿಮ್ಮ ಕುವರಿ ಜನಿಸಿದ ಪೊಳ್ತೊಳ್ಳಿತ್ತಲ್ತು. ಅದನರಿದುಂ, ಇಲ್ಲದಿಲ್ಲದೆ ಪಡೆದ ಸಂತಾನಮೆನುತೆ ಬಯಲ್ಪಡಿಸಲಳ್ಕಿದೆವು. ಆದರಿಂದಾ

ಪೆಣ್ ಪುಟ್ಟಿದ ದಿನಂ ಮೊದಲ್ಗೊಂಡೊದವುತಿರ್ಪೆಡರ್ಗಳೆಂತುಟೋ, ಅವುಗಳನೆಲ್ಲಮನೀಗಳೆಣಿಸಲೇಕೆ? ಕಾಲವಶದೆ ಸಮನಿಪುದನನುಭವಿಸದದಾರ್ಗಂ ತೀರದು ಗಡ! ಈಗಳಾಕೀರವಾಣಿ ನೆರೆದ ಲಗ್ನಮದಕ್ಕಂ ಕೇಳಪ್ಪುದು; ಅದಂ ನಿಮ್ಮಿದಿರೊಳ್ಪೆವರಿಪೆನೆಂದೊಡೆ ಬಾಯೆ ಬಾರದು; ಸೈತಿರ್ಪುದು ಸಮನಲ್ತು. 'ಮೊಸರಿಗೆ ಬಂದು ಮಡಕೆಯಂ ಮರೆಯಿಸುವುದೇ?'" ಎನುತೆ ತಾವರಿತುದನೆಲ್ಲಂ ಮರೆಯಿಸದರಿಪಿದರ್. ಆಗಳಾ ಇಳೆಯಾಣ್ಮಂ ಕಳೆಗುಂದಿದ ಮುಖವಿಲಾಸದೆ ತಲೆಯಂ ಬಾಗಿ, "ಮಗುವೆ, ನಿನ್ನನಾನೆನ್ನಭಾಗ್ಯದೇವತೆ ಎನುತೆ ನಚ್ಚಿರ್ದೆನಲೆ! ಎನ್ನ ನಚ್ಚಿಕೆ ವ್ಯರ್ಥವಾಗಿ ಗಾರುಡಿಗ ನುಡಿಗಳಂತೆ ಏನೇನೋ ಕೇಳಲಾದುದೆ! ಈ ಜೋಯಿಸರಾಡುವ ನುಡಿಗಳನಾದರಿಸಿ ನಾಂ ಬಾಳ್ವ ತೆರನಾವುದು? ತೆರನಾವುದುಮಿಲ್ಲೆನಲತ್ತೆಂಬವರಂ ಬಾರಿಸುವ ಮೇರೆಯದಾವುದು? ಅಯ್ಯಯೋ! ಈ ಸಮಯದೊಳೆಂತುಟೋ ಬಿನದಂಗಳ ನೆರಪಿ ಕಣ್ಣಾರೆ ಕಾಣಲಾರಯಲೀತರಮಲ್ಲದ ಸುದ್ದಿಯೊಂದೊದಗಿದುದೆ! ಇನ್ನೇನ ಮಾಳ್ಪೆಂ?" ಎಂದು ಮನದೆ ತತ್ತರಂಗೊಳ್ಳುತೆ ಬುಡಮುಟ್ಟೆ ತರಿದ ತರುವಿನಂದದೆ ಸಿಂಹಾಸನದಿಂದಿಳೆಗೆ ಬೀಳ್ದು, ಅಳಿದವನಂತೆ ಒಡಲಂ ಮರೆದು, ಉಸಿರಡಗಿರ್ದಂ. ಆ ದುರವಸ್ಥೆಯಂ ನೋಡಿ ಅಲ್ಲಿರ್ದ ಮಂತ್ರಿಪುರೋಹಿತ ಪ್ರಭೃತಿಗಳಪ್ಪಾಪ್ತಜನರಂತರಂಗದೊಳ್ ಚಿಂತಿಸಿ, ಆತನಂ ಮುಸುಕಿ, ಯಥೋಚಿತೋಪಚಾರಂಗಳನೊಡರ್ಚಿ, ಮೇಣೆನಿಸು ಪೊಳ್ತಿಗುಸಿರನುಗೊಳಿಸುವಂತೆಸಗಿದರ್. ಬಳಿಕವಾಮೇದಿನೀಪತಿ ಇತ್ತಲತ್ತಲ್ ಪೊರಳ್ದೊರಲ್ದು ಚೇತರಿಸಿಕೊಂಡೆಳ್ದು ಮೆಲ್ಲನೆ ಕುಳ್ಳಿರ್ದು, "ಹಾ! ಎನ್ನ ಮನಮಂ ಸುಡುತಿರ್ಪ ಈ ಕಿಚ್ಚನಾರಿಸುವುದೆಂತು? ಈ ಬೆಟ್ಟದರಪ್ಪ ಜೋ

ಯಿಸರ್ ಪುಟ್ಟಿದಂದೆ ಇದು ಕೆಟ್ಟುದು, ಇದಿನಟ್ಟುವುದೆನುತೆ ಪೇಳ ಲಿಲ್ಲವಲೆ!" ಎನುತೆ ನೀಡುಂ ಬಿಸುಸುಯ್ಯುತೆ ಇದಿರೊಳಿರ್ದ ಮಂತ್ರಿಗಳಂ ನಿಟ್ಟಿಸುತಿಂತೆಂದಂ—

"ಅಮಾತ್ಯರಿರ, ನೀವೆನ್ನ ಹಾನಿವೃದ್ಧಿಗಳ್ಗೆ ಪಾತ್ರರಪ್ಪಿರ್. ನಿಮ್ಮ ಬುದ್ಧ್ಯನುಸಾರವಾಗಿ ಪ್ರವರ್ತಿಸುವುದೆನಗೆ ಕರ್ತವ್ಯಮಪ್ಪುದು. ಅದರಿಂ ನಿರಪಾಯವಾದ ತರಣೋಪಾಯವಾವುದದನರಿಪುವುದು" ಎನಲಾ ಮಂತ್ರಿಬೃಂದಮಾ ನರೇಂದ್ರನಂ ಕಂಡು, "ಮನುಜೇಂದ್ರ, ಎಮ್ಮ ಮಗು ಜನಿಸಿದಾದಿಯಾಗಿ ಮಾರಿ ಮುಸಗಿದ ತೆರದೆ, ತುರಂಗಮಾತಂಗಾದಿಕ ಜೀವಧನಮೊಂದೊಂದೆ ನಶಿಸಿದುವು. ಮೇಣ್ ಸಂಪ್ರಾಪ್ತಂಗಳಾದನರ್ಥಂಗಳೋ, ಎಣಿಸಲಳವಲ್ತು. ಅದು ಕಾರಣಂ ಜೋಯಿಸರಾಡುವ ನುಡಿ ಅಟಮುಟಮಲ್ತು. ಈ ಕುವರಿಯಂ ತೊರೆವುದುಚಿತಮೆನ್ನುವರುಂ; ತೊರೆಯದಿರ್ದೊಡೆ ಒರ್ಕನ್ನೆಗೋಸುಗಂ ಸರ್ವನಾಶಸ್ವನಾಶಂಗಳಿಗೊಡಂಬಡಲಹುದೆ, ಎಂಬುವರುಂ; ಎತ್ತಣ ಮಾತು ಜ್ಯೋತಿಷ ಸಾಮುದ್ರಿಕ ಶಕುನ ಸ್ವಪ್ನಂಗಳ್ ಫಲಿಸುವುದುಂ ಫಲಿಸದಿರ್ಪುದುಂ ಕಾಕತಾಳನ್ಯಾಯಮಾಗಿರ್ಪುವು, ಅವುಗಳಂ ಪ್ರಮಾಣಮಾಗಿ ಕೈಕೊಂಡು, ಕನ್ನೆಯಂ ತ್ಯಜಿಸುವುದುಚಿತಮಲ್ತು, ಎಂಬವರುಂ; ಯುಕ್ತಾಯುಕ್ತಮನರಿಯದೆ ಎಡರಿ ಗಾಸಿವಡೆವುದರತ್ತಣಿಂ ದೂರದರ್ಶಿಗಳನಾರಯ್ದು ಒಂದು ಕಜ್ಜಕ್ಕುಜ್ಜುಗಿಪುದು ಸಮನಪ್ಪುದೆಂಬವರುಂ; ಇಂತು ಬಗೆ ಬಗೆಯಾಗಿ ಪೇಳ್ವ ಪ್ರಧಾನಿಗಳ ವೃಥಾವಾದಂಗಳಂ ವಾರಿಸಿ, ತಕ್ಕುದನಾರಯ್ದು, ನಯವಿಶಾರದನಾದ ವಿಶಾರದನೆಂಬ ಪ್ರಧಾನ ಮಂತ್ರಿಯಾ ಮಾನವಪತಿಗಿಂತೆಂದಂ—

"ನರವರಾ, ಶಾಸ್ತ್ರಂಗಳನನೃತಮೆನಲಾಗದು. ಧರ್ಮಸೂ

ಕ್ಷ್ಮಂಗಳಾರ್ಗಂ ಕಾಣಲಸದಳಮಲ್ತೆ! ಅದರಿಂ ಪೆತ್ತ ಪಸುಳೆಯಾ ದೊಡಂ ಹಾನಿ ಘಟಿಸುವುದೆಂಬ ನಿಂದೆಯುಂ ಪೊತ್ತ ಬಳಿಕ್ಕೆ ಪೊರೆಯ ಲಾಗದು. ಮೇಣ್ ಪೆಣ್ಬಾಲೆಯರ ರೂಪಳಿವುದುಮುಚಿತಮಲ್ತು. ಆವುದಾದೊಡಮೊಂದು ತೆರದೆ ಪರಿಹರಿಪುದು ಲೇಸು. ಇದಕನು ಗುಣಮಾಗಿ ಒಂದು ಪುರಾತನೇತಿಹಾಸಮಿರ್ಪುದು. ಅದಂ ಬಿನ್ನೈಸುವೆಂ; ಸಾವಧಾನಚಿತ್ತದಿನಾಲಿಪುದು —

ಮಂದರಧರನ ಮಂದಿರದಂದದೊಳಿಂದಿರಾಧಿಷ್ಠಾನಮಾಗಿ, ಮಧುರೆಯೆನೆ ನೆಗಳ್ದ ನಗರರಾಜಮೊಂದಿರ್ಪುದು. ಅದಂ ಪ್ರತಾಪ ವಿಜಿತ ಚಿತ್ರಭಾನುವೆನೆ, ಚಿತ್ರಭಾನುವೆಂಬ ರಾಯನಾಳುತ್ತಿರ್ದಂ. ಅವಂಗೆ ಚಿರಕಾಲಕೆ ಸಮುದ್ರರಾಜಂಗೆ ಕಮಲೆಯುದಯಿಸಿದಂ ತೊರ್ವ ಕಮಲಗಂಧಿ ಕುವರಿಯಾಗಿ ಅವತರಿಸಿದಳ್. ಆಕೆಯುಂ ಶುಕ್ಲಪಕ್ಷ ಕ್ಷಪಾಕರ ರೇಖೆಯುಂದದೆ ದಿನದಿನ ಪ್ರವರ್ಧಮಾನೆ ಯಾಗುತೆ, ವಯೋವತಿಯಾಗಿ, ಅಧರಪದ್ಮರಾಗೆಯುಂ, ರದನಹೀ ರಮಣಿಯುಂ, ನಖರಮೌಕ್ತಿಕೆಯುಂ, ಮೃದುಪದಪ್ರವಾಳೆಯುಂ, ಶಿರೋಜಹರಿನೀಲೆಯುಮಾಗಿ ಮಣಿಮಾಲಿಕೆ ಎಂಬನ್ವರ್ಥ ನಾಮ ಧೇಯಮಂ ಪಡೆದು ಗಾಡಿಯಿಂ ಮೆರೆಯುತಿರೆ, ಆಕೆಯಂ ಮದು ವೆಯಾಗಲೊಲಿದು ಪ್ರಣುತಾಮಲಕೀರ್ತಿಧನರುಂ, ಅನುಪಮಾನ ಸೌಂದರ್ಯಖನಿಗಳುಮಪ್ಪನೇಕರೇಕಮತಿಯಿಂ ದೂತರಂ ಕಳುಹಿ ಪ್ರತ್ಯಾಖ್ಯಾತರಾದರ್. ಸಾಸಿರ ಮಾತೇಕೆ? ಆ ಲಲನಾಮಣಿಯ ಕಡೆಗೆ ಬೃಂದಾರಕರ್ಕಳುಹುವ ರಾಯಬಾರಿಗಳ ಪಿಂತೆ ಪೋಗಿಬರ್ಪು ದರಿಂದಾನಾರದಂಗೆ ಒಂದೆಡೆಯೊಳ್ ಕಾಲೂರಿ ನಿಲ್ಲಲೆಡೆಯಿಲ್ಲದಂತಾ ಯ್ತು. ಎನಿತು ಜನಮೆನಿತು ರಾಯಬಾರಿಗಳಂ ಕಳುಹಿಸಿದೊಡಂ, ಆ ಚಂಪಕಗಂಧಿ 'ತಾಂ ಪಿಡಿದ ಮೊಲಕೆ ಮೂರೇ ಕಾಲ್ಗಳ್' ಎನು

ತ್ತಿರ್ದರ್. ಅದರಿಂದಾಕೆಯ ತಂದೆ ಹರೆಯುದವಳುಂ, ಒಯ್ಯಾರಿಯು ಮಪ್ಪ ದುಹಿತೆಯನನುದ್ವಾಹಿತೆಯಂ ಮನೆಯೊಳಿರಿಸಿರ್ಪನೆಂಬ ಜನರ ಬಾಯ್ಗೆ ಬೆದರಿ, ಅನುರೂಪ ವರಾನ್ವೇಷಣದೊಳ್ ಮನಂ ನೆಲಸಿ, ತನ್ನ ಮನದ ಬಯಕೆ ಫಲಿಸಲ್ ಚಿತ್ತಜಾತಜನಕನಂ ಪ್ರಾರ್ಥಿಸುತೆ; ದಿನಂಗಳಂ ಕಳೆಯುತ್ತಿರ್ದನ್.

ಅಂತಹ ಸಮಯದೊಳೊರ್ವಗಲ್ ಭಕ್ತಾಭಿಷ್ಟದಾಯಕ ನಪ್ಪ ವೈಕುಂಠನಾಯಕಂ, ಆ ರಾಯನ ಮನಸ್ತಾಪಮನಾರಿಸಲೋ ಎನೆ ಒರ್ವ ರಾಜಪುತ್ರಾಕೃತಿಯಂ ತಾಳ್ದು, ಆ ರಾಜಧಾನಿಗೈ ತಂದು, ರಾಜಮಾರ್ಗದೊಳ್ ಚರಿಸುತ್ತಿರ್ದನ್. ಆಗಳೀ ಮಣಿ ಮಾಲಿಕೆ ಜಳಕಂಗೈದು ನವಿರಾರಿಸಲುಪ್ಪರಿಗೆಯಂ ಸೇರಿ, ಅಲ್ಲಿಂ ರಾಜಮಾರ್ಗದೊಳ್ಚರಿಸುತಿರ್ಪಾ ಅರಗುವರನಂ ಕಣ್ಣಾರೆ ಕಂಡು, ಮನಂಗೊಳ್ಳುತೆ ಪ್ರಿಯಸಖಿಯಂ ಸನಿಹಕೆ ಕರೆದು, "ಆದಾವನೆ ಒರ್ವ ಸೊಗಸುಗಾರಂ! ಸಿರಿಯಮಗನ ಧಿಕ್ಕರಿಪವನತ್ತಲ್ ಸುಳಿ ದಾಡುತಿರ್ಪಂ ನಿಟ್ಟಿಸ! ಮುಡಿಗೆ ನಿಲ್ಕದ ನೆರೆನವಿರಲ್ಲಾಡೆ, ತಲೆಗೆ ತಾಳ್ದ ರಾಯಟೌಳಿಯ ಅಂಚುಗಳ ಮುತ್ತಿನ ಕುಚ್ಚುಗಳ್ಜೋಲಾಡೆ, ಚುಂಗು ಪರ್ಬಿ ಕಟಿಯೊಳ್ಕಟ್ಟಿದ ಜರತಾರಿಯುಡುಗೆಯ ಸೆರಗೋ ಲಾಡೆ, ಬೆಳಗು ಬಳೆಯೆ, ಮೆಯ್ಯೊಳ್ಪೊದೆದಂಗವಸ್ತ್ರಂ ಜೋಲಾಡೆ, ವೀರವೈಷ್ಣವನಂದದೆ ಪಣೆಯೊಳೂರ್ಧ್ವಪುಂಡ್ರಮೆಸೆಯುತಿರೆ, ಪು ನ್ನಾಗದಂದದೆ ಚರಿಸುತಿರ್ಪಾ ಪುನ್ನಾಗನನೆನ್ನೆಡೆಗೆ ಬರಿಸಲ್ಕನಂಬು ಗುವುದು. ಪೆಣ್ಣಾಗಿ ಜನಿಸಿ ಇಂತಹ ಮೋಹನಾಂಗನಂ ಕೈವಿಡಿಯದೆ, ಬಾಳ್ವುದೆಂತು?" ಎನುತೆ ಪ್ರಿಯ ಸಖಿಗೆ ತನ್ನ ಬಗೆಯಂ ತಿಳುಪಿ, ತೇನತೇನಂ ಕಾದಲ್ಮೆ ಮಿಗೆ ಸೊರ್ಕಿ ವ್ಯೆಮರೆದಳ್. ಅದರ್ಕೆ ಬೆದರಿ ಅವಳ ಕೆಳದಿಯರಾಹದನಂ ರಾಣಿಗರಿಪಿದರ್. ರಾಣಿಯುಂ

ಒಡನೆಯೆ ಒಡೆಯಂಗಾವಾರ್ತೆಯಂ ತಿಳುಹಿದಳ್. ಅದಂ ಕೇಳ್ದು ರಾಯನುಂ ಪ್ರಮುದಮನಾಂತು, "ಆರನೊಲ್ಲದ ಮಣಿಮಾಲಿಕೆ ಕೋರಿ ಕೈಕೊಳಲ್ ತಕ್ಕರಸುಮಗನೆನಿತುಸುಂದರನೊ ನೋಡುವಂ. ಬೇಗನೆ ಪೋಗಿ ಕರೆತರ್ಪುದು" ಎನುತೆ ಚಾರರಂ ತಳರ್ಚಿದಂ. ಅವರಾ ಆಣ್ಮನಾಣತಿಯಂ ಮುಡಿದುಡುಗೆ ಗೆಯ್ದು, ರಾಯಗೇರಿಗೈತಂದು, ಆ ಸೊಬಗನಂ ನಿಟ್ಟಿಸಿ, ಕೈಮುಗಿದು, "ಓ ಪಂಚಶರಾಕೃತಿ, ಎಮ್ಮ ನೃಪತಿ ನಿಮ್ಮಾಗಮನಮಂ ಕೇಳ್ದು, ನಿಮ್ಮಂ ನೋಡಲ್ಬಯಸಿರ್ಪಂ. ಎಮ್ಮ ಪಿಂತೆಯ ಬಿಜಯಂಗೆಯ್ವುದೆನಲಾ ಮಾಯುಗಾರಂ, "ಚಿತ್ರಭಾನುವಾಚಿತ್ರಭಾನುವಂತೆ ಮಹಾ ತೇಜಸ್ವಿಯೆಂದು ಕೇಳ್ದಾಮಾನ್ಯನನೆಂತು ಕಾಣಲಪ್ಪುದೆಂದು ಚಿಂತಿಸುತ್ತಿರ್ದೆಂ. ಎನ್ನ ಭಾಗ್ಯವಶದೆ, 'ಮಿಾಯಲ್ ಬಯಸಿದ ಮುನ್ನೀರಿದಿರೊಳೆ ಬಂದಂತೆ' ಆ ಪಟ್ಟಭದ್ರಂ ತಾನೆ ಎನ್ನಂ ಬರಿಸಲಾದುದೆ!" ಎನುತೆ ವಿಲಾಸಾರ್ಥಮಾಗಿ ಇಳೆಯೊಳ್ ಚರಿಸಲ್ಬಂದಿರ್ಪ ಜಲಜಬಂಧುವೋ ಎನೆ ಒಡಲಿಡಿದು ಕಡುಸೂಸುವೆಳವೆಳಗಿರ್ಕೆಲದೊಳ್ ಪರ್ಬಿರೆ, ಓಲಗದಾಣಕೈತಂದು, ಅಲ್ಲಿ ಭದ್ರಾಸನಾಸೀನನಾಗಿ ತನ್ನಾಗಮನಮನೆ ನಿರೀಕ್ಷಿಸುತಿರ್ದ ಚಿತ್ರಭಾನುವಂ ಕಂಡೆರಗಿ, ಕೈಮುಗಿದು ನಿಲಲಾರಾಯನವನಂ ಉಚಿತಸತ್ಕಾರಂಗಳಿಂದಾದರಿಸಿ, ತನ್ನಿದಿರೊಳ್ ಮಹೋನ್ನತಾಸನದೊಳ್ಕುಳ್ಳಿರಲ್ಬೆಸಸಿ, ಸಗೌರವದಿಂದಿಂತೆಂದಂ —

"ಎಲೆ! ಕುಮಾರಶೇಖರ, ನಿನ್ನಿಂದಲಂಕೃತಮಾದನ್ವಯಮಾವುದು? ನಿನ್ನಂ ಪೆತ್ತ ಸಂಪನ್ನರಾರ್? ನಿನ್ನ ಪೆಸರೇಂ? ಊರಾವುದು? ನಿನ್ನ ಆಗಮನಕೆ ಕಾರಣಮಾವುದು? ಇಲ್ಲಿಂದೆತ್ತ ಪೋದಪೈ? ಎನಗಾವುದಂ ಮರೆಯಿಸದೆ ಅರಿಪುವುದು" ಎನುತೆ ಬಿನ್ನೈಸಲಾರಾಜನಂದನನಿಂತೆಂದಂ — "ಈ ಲೋಕದೊಳ್ ದಿಟಮನಾಡು

ವರುಂ, ಆಡಿದುದು ದಿಟಮೆನ್ನುತ್ತೆ ನಚ್ಚುವರುಮಾರಿರ್ಪರ್? ಕೆಲವೆ ಡೆಯೊಳ್ ದಿಟಮೆ ಸಟೆಯಾದಪುದು; ಸಟೆಯೆ ದಿಟಮಾದಪುದು. ಆದ ಕಾರಣದಿನಾಂ ದಿಟಮಾಗೆನ್ನಯ ಉದಂತಮಾದ್ಯಂತಮಾಗಿ ಬಿನ್ನೈಸುವೆಂ; ಸಾದರದೆ ಕೇಳಲವಧರಿಪುದು. ಇಳೆಯೊಳ್ ಪ್ರಖ್ಯಾತಿವೆತ್ತ, ರತ್ನಾಕರಪುರಮೆನ್ನಯ ಪುರಂ. ಆಂ ರಾಜಾನ್ವಯ ಸಂಭವಂ; ಕಾಶ್ಯಪಗೋತ್ರಂ. ಚಂದಿರಕುಲದವರೆನ್ನಯ ಮುಂದಿ ರದವರ್. ಎನ್ನಯ ಪೆಸರ್ ಶ್ರೀಪತಿ. ಎನಗೆ ತಾಯ್ತುಂದೆಗಳಿ ರ್ಪರ್. ಆದೊಡಂ ಅವರ ಬಳಿಗಾಂ ಪೋಗುವುದಿಲ್ಲಂ. ದೈವಿಕ ಪ್ರಾಪ್ತಮಾದ ಐಸಿರಿಯ ಬಲ್ಮೆಯಿಂದೆನಗಾಸೇ ಬಳೆದೆಂ. ಶಯನ ಪ್ರಯಾಣಂಗಳೊಳೆನ್ನಂ ಪೊರೆಯಲ್ಕಾ ಸಾಸಿರಮೊಗದೆ ಪೊಗಳ್ವ ಪಾತಾಳದ ಭೋಗಿರಾಜನುಂ, ಪಕ್ಷಪಾತವರ್ತನರ್ಗರಸಾಗಿ ಮೆರೆ ವ ಪಕ್ಕಿಗಳರಸನುಂ ಕಟ್ಟಾಳ್ಗಳಾಗಿರ್ಪರ್. ರಂಗರಾಜಂ, ವೇಂಕ ಟರಾಜಂ, ವರದರಾಜನೆಂಬುವರೆನ್ನ ಕೆಳೆಯರ್. ಪೆರ್ಕಡಂಗಿನಿಂ ದವರಾಂ ತಾಮೆಯಾಗಿ ವರ್ತಿಪರ್. ಎನ್ನ ಮಾವಂ ಕಮಲಪತಿ; ಭಾಮ ಕಮಲೆ. ಅವಳ ಮೋಹಾತಿಶಯದೆ ಶ್ವಶುರಗೃಹಮೆ ಪರ ಮಸುಖಮೆನುತ್ತೆ ಮನೆಯಳಿಯನಾದೆಂ. ಅದೆ ನೆವಮಾಗಿಯಾಚ ಪಲೆ ತಾನೆ ಶ್ರೀಮತಿಯೆನುತುರ್ಬಿ, ಆವ ಕುಬೇರದೊಳಂ ಪೊಕ್ಕು, 'ಅವ್ವೆ ನೀಂ ಲೋಕಮಾತೆ, ಎಮಗೆ ಕಲ್ಪವಲ್ಲಿಗಡಾ!' ಎಂಬುವ ರ್ಗೆಣೆಯಿಲ್ಲದ ಸಿರಿಯನೊಡರಿಸಿದಳ್. ಚಿರಕಾಲಕೆ ಒರ್ಕುವರನು ದಯಿಸಲ್, ಅವಂ ಸೋದರಮಾವನವೊಲ್ಮೆರೆದು, ತನ್ನಂದದ ಚೆಲು ವರಿನ್ನೀಲೋಕವೊಳಿಲ್ಲೆನುತುರ್ಬಿ ರತಿಪ್ರಸಂಗದೊಳ್ ಸಿಲುಕಿ, ಈಶಾಪರಾಧಲೇಶದಿಂದನಂಗನಾದಂ. ಎನ್ನಂ ಮನೆಯಳಿಯನಂ ಗೆತ ಮಾವಂ ಮಿತಿಯಿಲ್ಲದ ರತ್ನರಾಶಿಗಳಂ ಗಳಿಯಿಸಿ, ರತ್ನಾಕರ

ನೆಂದು ಖ್ಯಾತಿವೆತ್ತೊಡಂ, ಭಂಗಸಂಗತನಾಗಿರ್ದಪಂ. ಅಂತಹ ಜಡಧಿಯ ಮನೆಯೊಳ್ ಮನೆಸೂರೆಗೊಂಬ ಮನೆವೆಂಡಿರೊಡಗೂಡಿ ಬಾಳ್ವುದರತ್ತಣಿಂ ವೈರಾಗ್ಯಮನವಲಂಬಿಸುವುದುಚಿತಮೆನುತಾರ ಯ್ದು, ಸರ್ವಸಂಪತ್ತುಗಳುಮಂ ಪರಿತ್ಯಜಿಸಿ, ದೇಶಾಟನಪರನಾಗಿ ಚರಿಸುತಿರ್ಪೆಂ. ಮಾರ್ಗವಶದಿಂದಿತ್ತಲ್ ಬಂದಿರ್ಪೆಂ. ಸಚ್ಚರಿತ್ರ ರಪ್ಪ ನಿಮ್ಮ ಸನ್ನಿಧಿಗೈತರಲಾಂ ಪಾತ್ರನಾದೆಂ. ಈಗಳೆಂದಾದೊಡ ಮಶನವಸನಂಗಳನಿತ್ತಾದರಿಪರಿರ್ದೊಡವರನೋಲೈಸಿರಲ್ ಮನಂ ಬುಗುವುದು. ಇಂತೆಂದೆನೆಂದೆನ್ನನಸಡ್ಡೆಯಾಗೆಣಿಸಲಾಗದು. ಬೇ ಳ್ಕುಮೆಂದೊಡೆ ಚಲಂಬಿಡಿದು ಜಲರಾಶಿಯಂ ಪುಗಲರಿವೆಂ. ಬೆಟ್ಟ ಮನಾದೊಡಂ ತಟ್ಟನಾಂಪೆಂ. ಸೌಕರ್ಯದಿಂದುರ್ವರೆಯನುದ್ಧರಿಸ ಬಲ್ಲೆಂ. ಪರಾಕ್ರಮದೆ ಮನುಜಸಿಂಹನೆನಿಸಿದಪೆಂ. ಎಡೆಯನೊಂದ ಡಿಯನಿತ್ತೊಡಂ ಬಾನ್ನೆಲಗಳನಾಕ್ರಮಿಸಬಲ್ಲೆಂ. ರಾಯಗುರುಪ ರಿತೊಡವರುರ್ಕುಸೊರ್ಕುಗಳಂ ತಗ್ಗಿಸುವೆಂ. ಪಲಮೊಗದೆ ಬಳೆ ದು ಬರ್ಪ ಪಗೆಯನಳಿಯಿಸಲ್ ಪಿಂತೆಗೆಯೆಂ. ಬಲಭದ್ರನೆನೆ ಬೀರ ಪಗೆಗಳ ತುಂಡಮುಂಡಂಗಳಂ ಚೆಂಡಾಡಬಲ್ಲೆಂ. ದುಷ್ಟಾ ಸುರನ್ನಿಗ್ರಹದೆ ಪ್ರಬುದ್ಧನಪ್ಪೆಂ. ಖಳರನಳಿಸಲ್ ಕಲ್ಕಿರೂಪದೊಳ್ ಪ್ರವರ್ತಿಸಬಲ್ಲೆಂ. ಅದೆಲ್ಲಮಿಾಗಳುಗ್ಗಡಿಸಲ್ ವೆಗ್ಗಳಮಲ್ತೆನೆ ತೋರ್ಪುದು. ಎಂತು ತೋರಿದೊಡೇಂ? ಎನ್ನ ಆಜನ್ಮವೃತ್ತಾಂ ತಮನೆಲ್ಲಮನರಿಪಿದೆಂ. ಇನ್ನುಮೆನ್ನಂ ಬರಿಸಿದ ಕಜ್ಜಮಾವುದು? ಅದನರಿಪುತೆನಗೆ ಮಾಣದಾಣತಿಯನಿತ್ತೊಡೆ, ಪೋಗಿ ಬರ್ಪೆಂ" ಎನೆ ಮೆಚ್ಚುತೆ ಇಳೆಯಾಣ್ಮನಿಂತೆಂದಂ --

"ಶ್ರೀಪತಿ, ನಿನ್ನ ಚರಿತ್ರೆಯದು ಪರಮಪವಿತ್ರಂ. ಅದಂ ಕೇಳ್ದೆನ್ನ ಶ್ರೋತ್ರಂಗಳ್ ಆನಂದಪಾತ್ರಂಗಳಾದುವು. ಕಾಶ್ಯಪಗೋ

ತ್ರರೆನಗೆ ಸನಿಹದ ನಂಟರಪ್ಪರ್. ನೀನವರ ಮನೆಯೊಳ್ಪುಟ್ಟಿದ ಕತದಿಂದೆನಗೆ ನಂಟುಮುಂಟಾದುದು. ನೀನೆಂದಾದೊಡಂ ಪೋಗಲೇಕೆ? ಊರೂರು ತಿರಿಗಿ ಸೈತು ಪೆಸರ್ವಾಸಿ ಕೆಡಿಸಿಕೊಳಲೇಕೆ? ಎನ್ನ ಬಾಲೆ ಸುಗುಣಶೀಲೆ; ಅನುರೂಪ ತಾರುಣ್ಯಲಾವಣ್ಯ ಸಂಪನ್ನನಪ್ಪ ವರನನಾರುಮಂ ಕಾಣದೆ, ಆ ಕುವರಿ ಇಂದಿನ ವರೆಗಂ ಪರಿಣಯಮಿಲ್ಲದಿರ್ಪಳ್. ಆ ಕನ್ನೆ ನಿನ್ನಂ ಕಂಡೊಲಿದಳಂತೆ. ನೀನವಳಂ ಮದುವೆನಿಂದು, ನಿನ್ನ ಮುನ್ನಿನ ಕೊರತೆಗಳಂ ಮರೆತು ಎನ್ನ ಬಳಿಯಿರ್ಪುದು. ಇಲ್ಲದಲ್ಲದ ಸಂದೆಗಂಗಳನೊಂದಿ ನೊಂದಲಸಬೇಡಂ. ಬೇಳ್ಕುಮೆಂದೊಡೆ, ಎನ್ನ ಸಾಮ್ರಾಜ್ಯಪಟ್ಟಮಂ ಕಟ್ಟಿಕೊಳ್ವುದು. ಎನ್ನನುಮೆನ್ನವರನುಮನಾಳಿಕೊಳ್ವುದು" ಎನಲಾ ಕಪಟ ನೃಪಕುಮಾರಂ, "ಸಂಸಾರಮಂ ರೋಸಿ, ಮನೆಯನೊಲ್ಲದೆ, ಅನಿತ್ಯೈಸಿರಿಯನುಳಿದು, ಪದುಳಮಿಲ್ಲದೆ ಕುಂದಿ ಗಾಸಿವಡೆದ ಪರದೇಶಿ ಎಲ್ಲಿ? ಸಿರಿಯ ನೆಲೆಯಾಗಿ ವರ್ತಿಪ ನಿಮ್ಮ ಕುವರಿ ಎಲ್ಲಿ? ಪರಿಣಯಮೆಲ್ಲಿ? ಎನ್ನೊಳೊಲುಮೆ ಇರ್ದೊಡೆ ತಕ್ಕೊಳಿಗಮನಿತ್ತು ಸಲಹುವುದು" ಎನಲಾ ಚಿತ್ರಭಾನು, "ಇದು ನುಡಿಯಲ್ತು. ಎನ್ನ ಪುತ್ರಿಯಂ ಮದುವೆನಿಂದು ಎನ್ನ ಮನೆಯೊಳೆ ಇರವೇಳ್ಕುಂ" ಎನುತೆ ನಿರ್ಬಂಧಿಸಲಾ ಶ್ರೀಪತಿ "ಇಳೆಯಾಣ್ಮರಪ್ಪ ನಿಮ್ಮ ನುಡಿ ಮೀರಿನಡೆವುದನುಚಿತಂ. ಅದರಿಂದಪ್ಪುದಕ್ಕೆ! ನಿಮ್ಮ ಮನಮಿರ್ದಂತೆ ನಡೆಯಲುಳ್ಳವಂ" ಎನುತಿನಿಸು ಮಾರ್ದವಮಂ ತೋರಿದಂ. ಬಳಿಕಾರಾಜಸತ್ತ್ವಮನದುವೆ ಸುಮುಹೂರ್ತಮೆನುತೆ ಸಕಲ ಬಾಂಧವ ಸಮುದಯಮುಹುದಹುದೆನೆ, ಪೌರಬ್ರಾಹ್ಮಣ ಸಮಕ್ಷದೆ ಮಣಿಮಾಲಿಕಾ ವಿವಾಹಮಹೋತ್ಸವಮಂ ಮಹಾವಿಭವಾನ್ವಿತಮಾಗಿ ನೆರಪಿದಂ.

ಅದುವೊದಲಾವನವಾಲಿ ಶ್ರೀಪತಿ ನಾಮಧೇಯದೆ ಮಣಿಮಾಲಿಕೆಯಿಂ ಕೂಡಿ, ಕೆಲಬರಿಸಂಗಳಾ ಮಧುರಾಪುರಿಯೊಳಿರ್ದು, ಒಂದು ದಿನಮೇಕಾಂತದೆ ಭೂಕಾಂತನಂ ಕಂಡು, "ಮಾವ, ನಿಮ್ಮ ಮನ್ನಣೆಯಿಂ ಪೆತ್ತು ಪೊರೆದರಂ ತೊರೆದ ಕೊರತೆಯನರಿಯದೆ ಸುಖದಿಂದಿನಿತು ದಿನಮಿರ್ದೆಂ. ಈಗಳೊರ್ಮೆ ಊರಿಗೆ ಪೋಗಿ ಬರಲ್ ಬಗೆ ಬಗೆದಿರ್ಪುದು. ಅಪ್ಪಣೆಯನಿತ್ತೊಡೆ ಪೋಗಿ ತಂದೆ ತಾಯ್ಗಳುಮಂ, ಪೆಂಡಿರ್ಮಕ್ಕಳ್ಗಳುಮಂ ಕಣ್ಣಿಂದೆ ನೋಡಿ ಬರ್ಪೆಂ. ಅವರೆಲ್ಲರುಮಿನಿತು ದಿನಮೆನ್ನಯ ಗಮನಮನರಿಯದೆ ಎನಿತುಬ್ಬೆಗಮನಾಂತರೊ! ಏನಾಗಿರ್ಪರೊ! ಎನ್ನ ಬಿನ್ನಪಮನಂಗೀಕರಿಪುದು" ಎನಲಾ ಪೊಡವಿಯೊಡೆಯ್ನುಂ ಕಡುತಡೆದು, ಕಜ್ಜಮನಾರಯ್ದು, "ಶ್ರೀಪತಿ, ನಿನ್ನಯ ಬೂಟಕಮೇನೆನಲಹುದು? ಅಂದಿನೊಳಾನೆಂದಾದೊಡಂ ಅಶನವಸನಂಗಳಿತ್ತಾದರಿಪರಿದೊಡೆ, ಇರ್ದಪೆನೆಂದೈ. ಈಗಳಾನುಡಿಯಂ ಪುಸಿದೈ? ನಂಟರಂ ನೋಡಲಿಚ್ಛೆಯಾದಪುದೆಂದಪ್ಪೆ. ಇದು ನಿನಗೆ ಸಲ್ಲುವುದೇಂ? ಪೆಂಡಿರ್ಮಕ್ಕಳ ಚರ್ಯೆಂಗಳಿರ್ದಗೆ ಜುಗುಪ್ಸೆಯಾಗೆ, ತಾಯ್ತಂದೆಗಳ ತಾಣಮನೊಲ್ಲದೆ, ಮನೆವಾಗಿಲ್ಗಳಂ ತೊರೆದು, ಬಂದವಂಗೆ ತನ್ನವರಂ ಕಾಣಲಿಚ್ಛೆ ಪುಟ್ಟುವುದುಂಟೆ? ಅಂದಿನೊಳೆ ಈ ಚಂದಮನರಿಪಿರ್ದೊಡೆ ಮಗೆ ಸಮನಪ್ಪ ತೆರನಾರಯ್ಯದಿರ್ಪೆವೆ? ರಾಯುಗುವರನೆಂದುಂ, ಅದರ್ಕೊಳ್ಳುಂ ಕಾಶ್ಯಪಗೋತ್ರ ಪವಿತ್ರನೆಂದುಂ, ಏಮ್ಮ ಕೊಡಗೂಸಂ ಕೈಕೊಂಡುದರ್ಕಂದಿನೊಳ್ 'ಉಪ್ಪು ಸಪ್ಪೆಯಪ್ಪುದು' ಎಂಬ ನುಡಿನುಡಿದು ಸಡಿಲಲುಜ್ಜುಗಿಪ್ಪೆ! ಇದೊಳ್ಳಿತೇಂ?" ಎಂದು ಪಲನಿಟ್ಟುರಂಗಳನಾಡುತಿರ್ಪ ಮಾವನಂ ಕಂಡು, "ಅಹುದೈ, ಎನಿತು ನುಡಿ ಪೇಳ್ದಿರೈ! ನೀವಿನಿತು ನಿಷ್ಠುರಂಗಳನಾಡುವಿರೆಂಬುದಂ ಕನಸಿ

ನೊಳಾದೊಡಂ ಕಂಡವನಲ್ಲಂ. ಅಪ್ಪುದಕ್ಕೆ, ಎನುತೆ ನಿಮ್ಮಯ ನಿಷ್ಠುರೋಕ್ತಿಗಳ್ಗಳ್ಕಿ, ನಮ್ಮವರ ಬಳಿಗೆ ಪೋಗದೆ ನಾನಿತ್ತಲೆ ಇರ್ದೊಡಂ, ಅವರಿಂದಿನೊಳಲ್ಲದೊಡೆ ಮೇಣ್ಕೆಲವುದಿನಂಗಳ್ಗಾ ದೊಡಂ ಎನ್ನನರಸುತೆ ಇತ್ತಲ್ಬರ್ಪರ್. ಬಂದೊಡವರ್ ಸೈತುಳಿದ ಪರಲ್ತು. ನೀಂ ಕನ್ನೆಯನಿತ್ತು ಅವರ ಮೇಲಳ್ತಿಯಂ ಮರೆಯಿಸಿ, ಎನ್ನಂ ಮನೆಯೊಳಿರಿಸಿಕೊಂಡಿರ್ಪಿರೆಂಬ ಈಡಲ್ಲದ ನುಡಿಯಂ ನು ಡಿದು ನಿಮ್ಮಂ ದೂರುವರ್. ಎನಗಾಗಿ ನಿಮಗೊಂದು ಲೋಪಂ ಪ್ರಾಪಿಸಲೇಕೆ? ಎಂದಲ್ಲದೆ ನಿಮ್ಮೊಳ್ಪುಸಿದು ಮೋಸಗೊಳಿಸಿದೆನಲ್ತು. ನೀವಂತೆಣಿಸಿದೊಡೆನ್ನಂ ಪೋಗೆಂದೊಡಂ ಪೋಗುವನಲ್ತು ಕಣಾ! ನಿಮ್ಮ ಕನ್ನೆಯ ಮೇಲೆನಗಿರ್ಪ ಮೋಹಮನಾದ್ಡೊಡಮೂಹಿಸಬಾ ರದೆ? ಮಾಣದೆ ಅಪ್ಪಣೆಯನೀವುದು. ಬೆಸವಡೆದು ಪೋಗಿ ಎನ್ನಂ ಕಾಣದೆ ಬಾಗುಳ್ವಡೆದಿರ್ಪ ನಂಟರಂ ನೋಡಿ, ಮೆಲ್ನುಡಿಗಳಿಂದ ವರಂ ಸ್ವಂತವಿಸಿ, ಬೇಗನೆ ಬರ್ಪೆಂ. ನಿಮಗೆ ಜಸಮನೀವೆಂ" ಎಂದು ಪಲಟಕ್ಕೆ ನುಡಿಗಳನೊಕ್ಕಣಿಸಿ, ಎಂತಾದೊಡಂ ಆ ಪಟ್ಟೆ ಭದ್ರಂ ಬೀಳ್ಕೊಡುವಂತೆಸಗಿ, ಮಣಿಮಾಲಿಕಾ ನಿಲಯಮಂ ಪೊಕ್ಕು ವಿನಯಂ ಮಿಗೆ ತನ್ನಭಿಪ್ರಾಯಮನಾಬಾಲೆಯ ಕಿವಿಗೆ ಮೆಲ್ಲನೆ ಸೋಂಕಿಸಿದಂ.

ಆಗಳಾಕಾಂತೆ ಪೆರ್ಗಾಳಿಗೆ ಬಾಗುವೆಳೆವಳ್ಳಿಯಂದದೆ ಕಳೆ ಮಸುಳಿ, ತಾಳ್ಮೆಯುಳಿದು, ಸೋತು ನೆಲಕೊರಗಿ ಮೈಮರೆದಳ್. ಅದಂ ಕಂಡು ಶ್ರೀಪತಿ ಪೆರ್ಮೆಯ ಕೂರ್ಮೆಯಿಂದವಳಂ ಮೆಲ್ಲನೆ ನೆಗಪಿ, ಎರ್ದೆಗೊರಗಿಸಿ, ಶೈತ್ಯೋಪಚಾರಂಗಳಿಂ ಸಂತವಿಸಿ, "ಎಲೆ ಮನೋಹಾರಿಣಿ, ನಿನ್ನಯ ಮನಮನಾರಯಲಿಂತುಸಿರ್ದೆನಲ್ಲದೆ, ಬಂದು ನಿಮಿಸಮಾದೊಡಂ ನಿನ್ನನಗಲಿರ್ದಪೆನೆ? ಇರ್ದೊಡಂ ಗಾಸಿ

ಪಡೆಯದೆ ಬಾಳ್ವೆನೆ? ಲೋಕಮರ್ಯಾದೆಗನುಗುಣವಾಗಿ ಈ ಎನ್ನ ಪಯಣಕನುಮತಿಸಿದೊಡೆ, ಅನಿಶಂ ನಿಶಿಗಳೊಳ್ ನಿನ್ನನಗಲದೆ ನಿನ್ನಲ್ಲಿ ಬಂದುಪೋಗುತಿರ್ಪೆಂ. ಈ ರಹಸ್ಯಮಂ ಪೆರರ್ಗಾರ್ಗಂ ತಿಳಿಸದೆ, ಎನ್ನ ಪೋಗುವಪುರ್ಗಳ್ಗೆ ಮುದಮನೊಂದಿ ಪ್ರವರ್ತಿಸಿ ದೊಡೆ, ಬಳಿಕ್ಕೆ ನಿನಗೀಡಲ್ಲದ ಪದವಿಯನೀವೆಂ" ಎಂದು ಪೇಳ್ದು ಮಣಿಮಾಲಿಕೆಯನೊಡಂಬಡಿಸಿ, ವನಮಾಲಿ ಕಣ್ಮರೆಯಾದಂ.

ಬಳಿಕಾಮದನಜನಕನನುದಿನಮಿರುಳಪ್ಪುದುಮಾಸನ್ನುತಾಂಗಿಯನೊಡಗೂಡಿ ಕಾಮಿತ ಸುಖಮನನುಭವಿಪಂತೆಸಗುತಿರಲ್, ಆ ಗುಟ್ಟಂ ಬಯಲ್ಪಡಿಸದೆ ಮೆರೆಯುತಿರೆ, ಕೆಲಬರಿಸಂಗಳೊಳಾ ವನಿತೆ ಬಸಿರನಾಂತಳ್. ಈ ಬಗೆಯನರಿತು ಆಕೆಯ ಕೆಳದಿಯರ್ ಗುಸುಗುಸುಗುಟ್ಟುತೆ, "ಉಸಿಕಮಿಪ್ಪುದೆಂತು? ಇದಂ ಮರೆಯಿಸಲೆಮಗೆ ನಿಂದೆ ಬಪ್ಪುದು" ಎಂದಾರಯ್ದು, ಮೆಲ್ಲನೆ ಭೂಭರ್ತನಂ ಸಾರ್ದು, "ನರವರಾ, ನಿಮ್ಮ ಕುವರಿ ಇನಿಯನಂ ತೊರೆದ ಪತ್ತು ಬರಿಸಕೆ ಬಸಿರನಾಂತಳ್. ಅದಕೆ ಮೂಲಮಾವುದೊ! ದೈವಮಲ್ಲದನ್ಯರರಿದಪರಲ್ತು" ಎಂದು ಬಿನ್ನೈಸಲಾ ಮನುಜೇಂದ್ರನಳ್ಕಿ, "ಹಾ! ಎಂತಹ ನುಡಿಗೇಳಲಾದುದು! ಈ ನುಡಿ ಇನ್ನುಂ ಬಯಲ್ಗೆ ಬೀಳದಿಪ್ಪುದೆ? ಬೀಳ್ದೊಡೇನೆಂದೊಡೆ ಕುಲಸ್ಥಾನಪೌರುಷಂಗಳ್ ಕಿಡದಿಪ್ಪವೆಂತು?" ಎಂದು ಜಾಮಾತನನುದ್ದೇಶಿಸಿ, "ಅಹುದೈ, ಶ್ರೀಪತಿ! 'ಅತಿವಿನಯಂ ಧೂರ್ತಲಕ್ಷಣಂ' ಎಂಬುದು ನಿನ್ನೊಳೆ ಚರಿತಾರ್ಥಮಾದುದು ಗಡಾ! ಟಕ್ಕುಗಿಕ್ಕುಗಳನರಿಯದೆಮ್ಮಂ ಸವಿನುಡಿಗಳಿಂ ಮರುಳ್ಗೊಳಿಸಿ, ಏನುಮನರಿಯದೆಮ್ಮ ಬಾಲೆಯಂ ಮದುವೆನಿಂದು, ಪಾಪಭೀತಿಗಳ್ಕದೆ, ನಂಟರಂ ನೋಳ್ಪ ನೆವದಿನೆಮ್ಮಂ ತೊರೆದುಪೋದೈ! ಅಪಯಶಮು

ನಿತ್ತ್ಯೆ! ಇದರಿಂ ನಿನಗೇಂ ಮೇಲೊದವಿದುದೈ? ಇನಿಯುಂ ತೊರೆದುಪೋದ ಪತ್ತು ಬರಿಸಕೆ ಬಾಲೆಗೆ ಬಸಿರೊದಗಿದುದೆಂಬುದಂ ಕೇಳ್ದವರೇನೆಂದಪರ್ಕೈ!" ಎಂದ್ದೆದೆರ್ದೆಯೊಳೊಗೆವ ಕಳವಳದೆ ತಿಮಿತಮಿಲ್ಲದೆ ಕಂದಿಕುಂದಿ ಕೊನೆಗೆ ತಿಳಿವನಾಂತು, "'ಇದಿರೊಳ್ಕಂಡುದು ಎದೆರ್ಯೊಳ್ ನೆರೆಯಿಕ್ಕಿದಬರೆ' ಎಂಬಂತೆ ನಮ್ಮಯ ಬಾಲೆ ಪ್ರತ್ಯಕ್ಷಮಾಗಿ ಗರ್ಭಮಂ ತಳೆದಿರ್ಪಳ್. ಪೆತ್ತ ಪಸುಳೆಯೆನುತೆ ಸೈತಿರುವುದೆಂತು? ರೀತಿ ತಪ್ಪಿದೊಡಾ ಪರಮಾತ್ಮಂಗಾದೊಡಂ ತೆಪ್ಪತ್ತುಕೊಳ್ಳದಿರಲಾಗದು. ಅದರಿಂ ತಕ್ಕುದನಾರಯ್ದು ಸರ್ವಸಂಗ ಪರಿತ್ಯಾಗಿಯಪ್ಪ ಯೋಗಿಯುಂದದೆ ದುಸ್ಸಂಗತಿಯನುಳಿದು ಪದುಳಮನಾಂಪೆಂ" ಎಂದು ಧೈರ್ಯಮನವಲಂಬಿಸಿ, ಕುವರಿಯಂ ತೊರೆಯಲುಜ್ಜುಗಿಸಿ, ಸಜ್ಜುಗೊಂಡು ಅಂದಿನ ನಕ್ತದೊಳ್ ನಿದ್ರಾಸಕ್ತೆಯಪ್ಪಾ ಅರವಿಂದಗಂಧಿಯನೊಂದು ಪೆಟ್ಟಿಗೆಯೊಳ್ ಪಟ್ಟಿರಿಸಿ, ಭಯಂಕರಮಾಗಿ ಉರವಣಿಸಿ ಪ್ರವಹಿಪ ಪುರಪರಿಸರಸರಿದಂತರದೊಳ್ ಬಿಸುಟ್ಟಂ.

ಅದರೊಳ್ ಬೀಳ್ದಾ ಪೇಳಿಗೆ ಅಮಂದಜವದಿಂದಂಬುಧಿಯಂ ಪೊಂದಿ ತಾರಾಗಣಾನುಕಾರಿ ಶೀಕರಪರಂಪರಾಚ್ಛಾದಿತಮಾಗಿ, ಆಕಾಶಮನನುಕರಿಸುತ್ತೆ, ಮೀನಾವಹಾರ ಕುಂಭೀರ ಶಿಂಶುಮಾರ ಪ್ರಮುಖಾಂಬುಚರಸಂಚರದ್ಘೂರ್ಣಮಾನಭಂಗ ಮಹೋತ್ತುಂಗ ತರಂಗಸಂಗತಮಾದಾ ಮಹಾರ್ಣವದೆ ಡೋಲಾಯಮಾನಮಾಗೆ, ಪ್ರಭಾಕರಮಂಡಲಂ ಮಿಗೆ ಬೆಳಗುತಿರಲಾ ಅಂಗನೆ ಅಲ್ಲಿಂ ಕೆಳಮೇಲಾಗಿ ತತ್ತರಗೊಂಡು ತಳವೆಳಗಾಗಿ, ಕನಸೆನುತೆ, ಎಚ್ಚರಿಕೆಯಿಂ ಕನಸಲ್ಲೆನುತರಿತು, ದೈವಾನುಗ್ರಹದೆ ಹರಣಮುಳಿಯದೆ ಬಳಲ್ದು, ತನಗೊದವಿದ ಗತಿಗೆ ಕಾರಣಮನಾರಯ್ಯುತ್ತೆ, ಧೈರ್ಯಗುಂದಿ,

“ಹಾ! ಅಮ್ಮ! ಹಾ! ಅಕ್ಕ! ಹಾ! ಅಯ್ಯ! ಹಾ! ಸಖಿ! ಎನ್ನಂ ಪೊರೆಯಿರೆ! ಎನ್ನ ಮೊರೆಯನಾಲಿಸಿರೆ! ನೀರಧಿಯೊಳ್ ಬಿಸುಡಲಾಂ ಗೆಯ್ದಪರಾಧಮನಾದೊಡಂ ಪೇಳಿರೆ! ತಪ್ಪನೊಪ್ಪಿಸದೆ ಪೋದ ಪರೆ!” ಎಂದು ತನ್ನವರನೆಲ್ಲಂ ಓರೊರ್ವರನಾಗಿ ಆರ್ದು, ಪಡಿನುಡಿ ಯಿಲ್ಲದೆ ಮಾಣದ ಮಮತೆಯನುಳಿದು, ಅಳ್ಕಂ ನೀಗಿ ಪುರಾಕೃತ ಸುಕೃತ ಪರಿಪಾಕದಿಂದೊಗೆದ ಸುಜ್ಞಾನವಿಶೇಷಮೊದವೆ, ಅರಕ್ಷಿ ತರಕ್ಷಕನರವಿಂದಾಕ್ಷನೆ ತನಗೆ ರಕ್ಷಕನೆಂದಾರಯ್ದು, ಆ ವಿರಿಂಚಿ ಜನಕನನಿಂತು ಜಾನಿಸಿದಳ್ :—

ಉತ್ಪಲಮಾಲಾವೃತ್ತಂ.

ಹಾ! ಜಗತೀವಧೂರಮಣ! ಹಾ! ಚತುರಾಸ್ಯಮುಖಾಮರಸ್ತುತಾ! |
ಹಾ! ಜಿತದಾನವಪ್ರಕರ! ಹಾ! ಅಖಿಲಾಬ್ಜ ಭವಾಂಡನಾಯಕಾ! |
ಹಾ! ಜಯಶೀಲ! ಹಾ! ವರದ! ಹಾ! ಮುನಿಸೇವಿತ! ಹಾ! ಮುಕಂದ! ಬಾ |
ರಾ ಜಡರಾಶಿಯೊಳ್ಮುಳುಗುತಿರ್ದಪೆನುದ್ಧರಿಸಾರ್ತರಕ್ಷಕಾ! ||

ಸೀಸವೃತ್ತಂ.

ಸುರರಿಪುರಿಪುವೆನಲ್ ದನುಜೇಂದ್ರನಂ ಸೀಳಿ, |
ತರಳಪ್ರಹ್ಲಾದನ ಕಾಯ್ದ ಬಂಧು! ||
ಉರುತರಾಗ್ರಹ ಜಲಗ್ರಾಹದಿಂ ಬಳಲ್ದಿರ್ದ |
ದ್ವಿರದಾಧಿಪನನೋತ ದೀನರಕ್ಷ! ||

ಉರಿವ ದೂರ್ವಾಸನೋಗ್ರ ಕೋಪಾಗ್ನಿಯತ್ತಣಿಂ |
ನೆರೆಯಂಬರೀಷನ ಪೊರೆದ ವರದ! ||
ನರಕಪಟ್ಟಣ ಕೀಳ್ವ ಜವನವರ್ಗಳ್ಕರೆ |
ಭರದಜಾಮಿಳನ ಸಲಹಿದೀಶ! ||

ಗೀತೆ.

ಬನ್ನಮಿನ್ನುಂಟೆ ನಿನ್ನನೆ ನಚ್ಚಿದರ್ಗೆ ? |
ಎನ್ನನೆಂತಹ ಶೋಕಾಬ್ಧಿಯಳುರ್ದುದೀಗ ||
ಳಿನ್ನು ಬೇಗನೆ ರಕ್ಷಿಸೈ ದೀನಬಂಧು ! |
ಸನ್ನುತಾಮಲಕೀರ್ತಿ ! ಶ್ರೀ ಕೃಷ್ಣಮೂರ್ತಿ ! ||

ಎಂದೀಪರಿಯೊಳತಿಶೋಕದಿಂದಂ ಪ್ರಳಾಪಿಸುವ ಇನಿಯಳ ಆರ್ತಾರಾವಮನಾ ವನಮಾಲಿಯಾಲಿಸಿ, ಕರುಣಿಸಿ ಕಡಲೊಳ್ ತೇಲಾಡುತಿರ್ಪಾ ಪೇಳಿಗೆಯುಂ ಕೊಂಡು, ತನ್ನ ಸನ್ನಿಧಾನಕ್ಕೈತರಲಾ ಗರುತ್ಮಂತಂಗೆ ಬೆಸಸಲಾ ವೈನತೇಯನುಂ ಕಡುವೇಗದಿಂ ಬಂದು, ಕಡಲಂ ದಾಂಟಿ ಜಲಧಿಯೊಳ್ ಚರಿಪ ಮೀನ್ಗಳನೊದೆದು ಕೊಂಡು ಪೋಗುವ ಮೀನಾಪಹಾರಿಯಂದದೆ, ನಿಕ್ಷಿಪ್ತಮಣಿಮಾಲಿಕೆಯಪ್ಪಾ ಮಣಿಪೇಳಿಗೆಯನಿರ್ಕಯ್ಗಳಿಂ ತರ್ಬಿ, ಬಾನ್ಗೆ ನೆಗೆದು, ವಾಯುವೇಗದೊಳ್ಪರಿದು, ಪಾಲ್ಗಡಲ ನಡುವೆ ಬೆಳ್ದೀವಿಯೊಳಂಬುಜ ಭವಾದ್ಯಮರಗಣ ಸೇವಿತನಾಗಿ, ನಾರದಾದಿ ದೇವಮಹರ್ಷಿಗಣಂ ಪರಮಹರ್ಷಿತರಾಗಿ ಕೀರ್ತಿಸೆ, ಗಂಧರ್ವರ್ಪಾಡೆ, ಅಪ್ಸರಸರಾಡೆ, ವೈಕುಂಠಧಾಮದೊಳ್ ಪೇರೋಲಗಂಗೊಂಡಿರ್ಪ ಮಂದರಧರನ ಮುಂದೆ ಆನಂದಮೊದವಲಿಳಿಸಿದಂ.

ಆಗಳಾ ಅನಂತಶಯನಂ ಮಂಜೂಷಾಂತರ್ಗತೆಯಪ್ಪಾ ಮಂಜುವಾಣಿಯಂ ಮೆಲ್ಲಗೆ ಪೊರವಡಿಸಿ ದಿವ್ಯಮಣಿ ಕೋಟಿ ಸಂಘಟಿತ ಕೋಟೀರನುಂ, ಮಣಿಮೇಖಲಾವೇಷ್ಟಿತ ಕಟಿತಟನುಂ, ಮಕರಕುಂಡಲ ಕೇಯೂರ ಹಾರಾದ್ಯಲಂಕೃತನುಂ, ಅನಂತಗರುಡ ವಿಷ್ವಕ್ಸೇನಾದಿ ನಿತ್ಯಸೂರಿಪರಿವೃತನುಂ, ಶ್ರೀವತ್ಸ ಕೌಸ್ತುಭಾಂಚಿತ

"ಹಾ! ಅಮ್ಮ! ಹಾ! ಅಕ್ಕ! ಹಾ! ಅಯ್ಯ! ಹಾ! ಸಖಿ! ಎನ್ನಂ ಪೊರೆಯಿರೆ! ಎನ್ನ ಮೊರೆಯನಾಲಿಸಿರೆ! ನೀರಧಿಯೊಳ್ ಬಿಸುಡಲಾಂ ಗೆಯ್ದಪರಾಧಮನಾದೊಡಂ ಪೇಳಿರೆ! ತಪ್ಪನೊಪ್ಪಿಸದೆ ಪೋದ ಪರೆ!" ಎಂದು ತನ್ನವರನೆಲ್ಲಂ ಓರೊರ್ವರನಾಗಿ ಆರ್ದು, ಪಡಿನುಡಿ ಯಿಲ್ಲದೆ ಮಾಣದ ಮಮತೆಯನುಳಿದು, ಅಳ್ಕಂ ನೀಗಿ ಪುರಾಕೃತ ಸುಕೃತ ಪರಿಪಾಕದಿಂದೊಗೆದ ಸುಜ್ಞಾನವಿಶೇಷಮೊದವೆ, ಅರಕ್ಷಿ ತರಕ್ಷಕನರವಿಂದಾಕ್ಷನೆ ತನಗೆ ರಕ್ಷಕನೆಂದಾರಯ್ದು, ಆ ವಿರಿಂಚಿ ಜನಕನನಿಂತು ಜಾನಿಸಿದಳ್ :—

ಉತ್ಪಲಮಾಲಾವೃತ್ತಂ.

ಹಾ! ಜಗತೀಮಧೂರಮಣ! ಹಾ! ಚತುರಾಸ್ಯಮುಖಾಮರಸ್ತುತಾ! |
ಹಾ! ಜಿತದಾನವಪ್ರಕರ! ಹಾ! ಅಖಿಲಾಬ್ಜಭವಾಂಡನಾಯಕಾ! |
ಹಾ! ಜಯಶೀಲ! ಹಾ! ವರದ! ಹಾ! ಮುನಿಸೇವಿತ! ಹಾ! ಮುಕಂದ! ಬಾ |
ರಾ ಜಡರಾಶಿಯೊಳ್ಮುಳುಗುತಿರ್ದಪೆನುದ್ಧರಿಸಾರ್ತರಕ್ಷಕಾ! ||

ಸೀಸವೃತ್ತಂ.

ಸುರರಿಪುರಿಪುವೆನಲ್ ದನುಜೇಂದ್ರನಂ ಸೀಳಿ, |
ತರಳಪ್ರಹ್ಲಾದನ ಕಾಯ್ದ ಬಂಧು! ||
ಉರುತರಾಗ್ರಹ ಜಲಗ್ರಾಹದಿಂ ಬಳಲ್ದಿರ್ದ |
ದ್ವಿರದಾಧಿಪನನೋತ ದೀನರಕ್ಷ! ||

ಉರಿವ ದೂರ್ವಾಸನೋಗ್ರ ಕೋಪಾಗ್ನಿಯತ್ತಣಿಂ |
ನೆರೆಯಂಬರೀಷನ ಪೊರೆದ ವರದ! ||
ನರಕಪಟ್ಟಣ ಕೀಳ್ವ ಜವನವರ್ಗಳ್ಕಿರೆ |
ಭರದಜಾಮಿಳನ ಸಲಹಿದೀಶ! ||

ಗೀತೆ.

ಬನ್ನಮಿನ್ನುಂಟೆ ನಿನ್ನನೆ ನಚ್ಚಿದರ್ಗೆ ? |
ಎನ್ನನೆಂತಹ ಶೋಕಾಬ್ಧಿಯುಳುದುರ್ದೀಗ ||
ಳಿನ್ನು ಬೇಗನೆ ರಕ್ಷಿಸೈ ದೀನಬಂಧು ! |
ಸನ್ನುತಾಮಲಕೀರ್ತಿ ! ಶ್ರೀ ಕೃಷ್ಣಮೂರ್ತಿ ! ||

ಎಂದೀಪರಿಯೊಳತಿಶೋಕದಿಂದಂ ಪ್ರಳಾಪಿಸುವ ಇನಿಯಳ ಆರ್ತಾರಾವಮನಾ ವನಮಾಲಿಯಾಲಿಸಿ, ಕರುಣಿಸಿ ಕಡಲೊಳ್ ತೇಲಾಡುತಿರ್ಪಾ ಪೇಳಿಗೆಯಂ ಕೊಂಡು, ತನ್ನ ಸನ್ನಿಧಾನಕ್ಕೈತರಲಾ ಗರುತ್ಮಂತಂಗೆ ಬೆಸಸಲಾ ವೈನತೇಯನುಂ ಕಡುವೇಗದಿಂ ಬಂದು, ಕಡಲಂ ದಾಂಟ ಜಲಧಿಯೊಳ್ ಚರಿಪ ಮೀನ್ಗಳನೊದೆದು ಕೊಂಡು ಪೋಗುವ ಮೀನಾಪಹಾರಿಯಂದದೆ, ನಿಕ್ಷಿಪ್ತಮಣಿಮಾಲಿಕೆಯಪ್ಪಾ ಮಣಿಪೇಳಿಗೆಯನಿರ್ಕಯ್ಗಳಿಂ ತರ್ಬಿ, ಬಾನ್ಗೆ ನೆಗೆದು, ವಾಯುವೇಗದೊಳ್ಪರಿದು, ಪಾಲ್ಗಡಲ ನಡುವೆ ಬೆಳ್ದೀವಿಯೊಳಂಬುಜ ಭವಾದ್ಯಮರಗಣ ಸೇವಿತನಾಗಿ, ನಾರದಾದಿ ದೇವಮುಹರ್ಷಿಗಣಂ ಪರಮಹರ್ಷಿತರಾಗಿ ಕೀರ್ತಿಸೆ, ಗಂಧರ್ವರ್ಪಾಡೆ, ಅಪ್ಸರಸರಾಡೆ, ವೈಕುಂಠಧಾಮದೊಳ್ ಪೇರೋಲಗಂಗೊಂಡಿರ್ಪ ಮಂದರಧರನ ಮುಂದೆ ಆನಂದವೊದವಲಿಳಿಸಿದಂ.

ಆಗಳಾ ಅನಂತಶಯನಂ ಮಂಜೂಷಾಂತರ್ಗತೆಯಪ್ಪಾ ಮಂಜುವಾಣಿಯಂ ಮೆಲ್ಲಗೆ ಪೊರವಡಿಸಿ ದಿವ್ಯಮಣಿ ಕೋಟಿ ಸಂಘಟಿತ ಕೋಟೀರನುಂ, ಮಣಿಮೇಖಲಾವೇಷ್ಟಿತ ಕಟಿತಟನುಂ, ಮಕರಕುಂಡಲ ಕೇಯೂರ ಹಾರಾದ್ಯಲಂಕೃತನುಂ, ಅನಂತಗರುಡ ವಿಷ್ವಕ್ಸೇನಾದಿ ನಿತ್ಯಸೂರಿಪರಿವೃತನುಂ, ಶ್ರೀವತ್ಸ ಕೌಸ್ತುಭಾಂಚಿತ

ವಕ್ಷನುಂ, ಪುಂಡರೀಕಾಕ್ಷನುಂ, ಸುದರ್ಶನಪಾಂಚಜನ್ಯಕೌಮೋದಕೀನಂದಕಶಾರ್ಙಹಸ್ತನುಂ, ಪೀತಕೌಶೇಯವಾಸಃಪ್ರಶಸ್ತನುಂ ನೀಲನೀರದ ಸನ್ನಿಭಕಾಯನುಂ, ಸಕಲಗುಣಾಭಿರಾಮನುಂ, ಶ್ರೀರಾಮನುಮಾಗಿ ಸಾಕ್ಷಾತ್ಕರಿಸಲಾ ಸರೋಜಾಕ್ಷಿಯತುಲಿತಭಕ್ತಿಶ್ರದ್ಧಾನ್ವಿತೆಯಾಗಿ,

ಮಾಲಿನಿ.

ಜಯಜಯಶುಭನಾಮಾ! ಸರ್ವಲೋಕಾಭಿರಾಮಾ! |
ಜಯಜಯರವಿಧಾಮಾ! ಚಾರುಸತ್ಕೀರ್ತಿಸೋಮಾ! ||
ಜಯಜಯಜಗದೀಶಾ! ಸಾಧುಭಾವಪ್ರಕಾಶಾ! |
ಜಯಜಯಖಲನಾಶಾ! ಶತ್ರುರಾಟ್ಕಂಠಪಾಶಾ! ||

ಎಂದು ನುತಿಸುತ್ತೆ, ಕೃತಾಂಜಲಿಯಾಗಿ ಆ ಕಂಜಲೋಚನೆ "ದೇವ, ಭವಚ್ಚರಣಾರವಿಂದ ಸೇವಾಮರಂದ ರಸಾಸ್ವಾದನಮಂ ಗೆಯ್ಯಲಾದುದರಿಂದೆನ್ನಯ ಪತಿಯಪ್ಪ ಶ್ರೀಪತಿಯಂ ಕಾಣ್ಡಪೆನೆಂದು ನಿಶ್ಚೈಸುವೆಂ" ಎನಲಾಮಂದರಧರಂ ಮಂದಹಾಸವದನದಿಂದಂ, "ಓ ರಮಣೀಮಣಿ! ನಿನ್ನಯ ನವಲಾವಣ್ಯವೈಭವಮಂ, ದೇವಮುನಿ ನಾರದನತ್ತಣಿಂ ಕೇಳ್ದು, ಕರಂ ಮೆಚ್ಚಿ, ಅನುರಾಗಂ ಮಿಗೆ ಮನದೆ ನೀನೆನ್ನನೊಲಿವ ತೆರನಾರಯ್ದು, ನಿಮ್ಮ ಪೊಳಲ್ಗೆಯ್ತಂದು, ನಿಮ್ಮಯ್ಯಂಗಿಲ್ಲದ ನಂಟತನಮಂ ಪೇಳ್ದು, ನಿನ್ನಂ ಮದುವೆನಿಂದು, ನಿನ್ನೊಡಗೂಡಿರ್ದಗಲಿದ ಶ್ರೀಪತಿ ಇವಂ ನಿಟ್ಟೈಪುದು!" ಎಂದು ಸಿರಿ ಮುನ್ನಿನ ಶ್ರೀಪತಿಯರೂಪಮನಾಂತು ನಿಲಲಾಮಣಿಮಾಲಿಕೆ ಕಂಡು, ಮನದೊಳ್ಸಂತಸಮೊದವೆ, ನಾಣ್ಮಿಗೆ ತಲೆವಾಗಿ, ತನ್ನೊಳೆಡೆಗೊಂಡಿರ್ದೆಡರನೆಣಿಸಿ, ಕಳವಳಿಸಲ್ ತೊಡಗಿದಳ್. ಶ್ರೀಪತಿ ಆ ಇಂಗಿತಮನರಿತು, "ಲತಾಂಗಿ, ನಿನ್ನನಂತು ವರಿಸಿ, ಎನ್ನ ನಿಲಯಕೆ

ಬರಿಸಲುಪಾಯಮನಾರಯ್ದು, ಆನಾಗಿ ಬರಿಸಿದೊಡೆ ನಿಮ್ಮ ತಾಯ್ತಂದೆಗಳ್ ಚಲಿಸಿ ತೊಳಲುತಿರ್ಪರೆನುತೆ, ಅನಿಶಂ ನಿಶಿಗಳೊಳ್ ಅನ್ಯರರಿಯದಂತೆ ನಿನ್ನಂ ಕೂಡಿ ನಿನಗೆ ಬಸಿರನೆಸಗಿ, ನಿಮ್ಮವರ್ ಬೇರೊಂದು ಬಗೆದು ನಿನ್ನಂ ತ್ಯಜಿಸುವಂತೆಸಗಿದೆಂ. ಇದರಿಂ ನೀನಿನಿಸಾದೊಡಂ ಕೊರತೆಯನೆಣಿಸಲಾಗದು" ಎನುತುಚಿತೋಕ್ತಿಗಳಿಂದವಳಂ ಮನ್ನಿಸಿ, ಹೀರಮಣಿವಿನಿರ್ಮಿತರಮ್ಯಹರ್ಮ್ಯೋಪರಿತಲಮಂ ಸಾರ್ಚಿ, ಉಚಿತ ಪರಿಚರ್ಯಂಗಳನೆಸಗಲ್ ಚತುರಪರಿಚಾರಿಣಿಯರಂ ಪಲಬರಂ ನಿಯಮಿಸಿ, ಆ ವನಮಾಲಿ ಪಾಲಿತಾಖಿಲಲೋಕನಾದೊಡಂ, ಮಣಿಮಾಲಿಕಾ ವಿಲೋಕನಾನುವರ್ತನಪರನಾಗಿ ವರ್ತಿಸುತ್ತಿರ್ದಂ. ಬಳಿಕ್ಕೆ ಕೆಲದಿನಕೆ ಆ ನಲ್ಲೆ ನನೆವಿಲ್ಲನಂ ಧಿಕ್ಕರಿಪ ಮುದ್ದು ಕುವರನೊರ್ವನಂ ಪಡೆದಳ್. ಅವನೆ ವಿಷ್ಣುವರ್ಧನಾಹ್ವಯದೆ ಪ್ರವರ್ಧಮಾನನಾಗಿ ಶಾಲ್ಮಲದ್ವೀಪದಾಣ್ಮನಾದಂ.

ಅದು ಕಾರಣದಿಂ "ಎಲೆ! ಭೂವರಾ, ನಿಮ್ಮ ಕುವರಿಯುಂ ಚಿತ್ರಭಾನು ಮಣಿಮಾಲಿಕೆಯಂ ತೊರೆದಂದದೆ ತೊರೆದೊಡದರಿಂದೊಗೆದನಿಂದೆ ತೊಲಗುವುದು. ಇದರಿಂದೆಮ್ಮಯ ಸಂದೆಗಂಗಳ್ ಕುಂದುಗುಂ, ದೈವವಶದಿಂದಾಕೆ ಸೊಗಮನಾಂತೊಡಮಾಂಪಳ್" ಎಂಬ ಹಿತೋಪದೇಶಮಂ ದುರಿತವಿರಹಿತಮಾಗಿ ಉಪದೇಶಿಸುವ ಅಮಾತ್ಯನುಪದೇಶಮಂ ಕೈಕೊಂಡು, ಪೆರ್ಚುವ ಚಿಂತೆಯಂ ತಡೆದು, ಋತುಸ್ನಾತೆಯಾಗುವನ್ನೆಗಂ ಕುವರಿಯನೊಂದೇಕಾಂತ ಗೃಹದೊಳಿರಿಸಿ, ತ್ಯಜಿಸಲುಜ್ಜುಗಿಸಿ, ಆ ಸಜ್ಜುಮನವಳರಿಯದಂತೆ ಮಿಂದಮರುವಗಲರ್ಧರಾತ್ರಿಯೊಳ್ ಮೈಮರೆದು ನಿದ್ರಿಸುತಿರ್ದಾ ಇಂದುವದನೆಯನಿನಿಸಾದೊಡಂ ಶಂಕಿಸದೆ, ಒಂದು ಪೆಟ್ಟಿಗೆಯೊಳಿಟ್ಟು,

ಬೀಗಮುದ್ರೆಗಳಂ ಕೀಲಿಸಿ, ಪುರೋಪಕಂಠದೊಳ್ ಪ್ರವಹಿಸುವ ಸ್ರವಂತಿಯೊಳ್ ಬಿಸುಟ್ಟಂ.

ಬಳಿಕವಾಪೇಳಿಗೆ ಇರ್ಕಡೆಗಳೊಳಿರ್ಪ ಕರೆಗಳಂ ತಟ್ಟಿ, ಇದಿರೋಳ್ಕಟ್ಟುವ ನೀರಿನೊಳ್ಪುಟ್ಟಿ ಮಿಡಿವ ಗಂಡಲೆಗಳುಂ, ಅಲೆಗಳಂ ಪಿಂದಟ್ಟಿ ಪೆತ್ತು ಬೆಳೆವ ನೊರೆ ತೆರಳ್ಕೆಗಳುಂ, ತೆರಳ್ಕೆಗಳನೊಡಗೊಂಡು ಗುಡುಗುಡಿಸುವ ಸುಳಿಗಳುಂ, ಸುಳಿಗಳೊಳ್ ಬೀಳ್ದು ಪೊರಮಡಲ್ ತಡಮಾಡುವ ಜಲಚರಂಗಳುಂ, ಜಲಚರಂಗಳ್ ತೀವಿಕರಿಯಿಂದೆಯುಂ ತರಿಸಲಾಗದೆ ಪ್ರವಹಿಸುತಿರ್ಪಾಮಹಾ ಪ್ರವಾಹದೊಳ್ ಸಿಲುಕಿ, ಇತ್ತಲತ್ತಲ್ ಪೊರಳ್ದು, ಕೆಳಮೇಲಾಗಿ ತೇಲಾಡುತೆ, ಪೋಪೋಗಲದರೊಳ್ ಮಲಗಿರ್ದ ಕನ್ನೆ ತಳವೆಳಗಾಗಿ ಏಳಲುಂ ಕುಳ್ಳಿರಲುಂ ತೆರನನರಿಯದೆ, ಅದಕೆ ಮುನ್ನಮೆ ತನ್ನಂ ಕುರಿತು ತನ್ನವರಾಡುತಿರ್ದ ಪುರುಳಿಲ್ಲದ ನುಡಿಗಳಂ ಕರ್ಣಾಕರ್ಣಿಯಾಗಿ ಕೇಳಿರ್ದುದರಿಂ, ಅಹುದಲ್ತೆನ್ನದೆ ತನ್ನಂ ಪೊಳೆಯೊಳ್ ಬಿಸುಟ್ಟರೆಂದಾರಯ್ದು, "ಅಯ್ಯಯೋ! ನಮ್ಮಯ್ಯಂ ಪಾರ್ವರ ನುಡಿಗಳಂ ನಚ್ಚಿ, ಪೆತ್ತ ಪಸುಳೆಯೆಂಬುದನರಿಯದೆ ಬೆಟ್ಟದನಾಗಿ ತನ್ನನಿಂತು ಬಿಸುಟ್ಟಂತೆ ತೋರ್ಪುದು! ಅಲ್ಲದಿರೆನಗೀಪೇಳಿಗೆಯೊಳ್ ಗಾಸಿವಡೆಯುತಿರ್ಪುದೇಕೆ? ಅಪ್ಪಾ! ಈ ಪಾಂಗೆನಗೇಕೆ? ಇಂತೆನ್ನಂ ಗೋಳಿಡುವುದರತ್ತಣಿಂ ಪಟ್ಟದ ಬಾಳಂ ಕೊಂಡು ತಲೆಯಂ ತಟ್ಟನೆ ಸೀಳಲಾಗದೆ! ಜೋಯಿಸರೆ! ಇಂದಿನೊಳೆಂದನುಡಿ ಚಿಕ್ಕಂದಿನೊಳೆ ನುಡಿದು ಪುಣ್ಯಮಂ ಕಟ್ಟಿಕೊಳಲಲ್ತಾದುದೆ? ನೀವೇನೆಂದೊಡೇಂ, ಪೆತ್ತವರ್ಗೆ ಕರುಣೆಯಿಲ್ಲದೆ ಪೋದುದೆ? ಅಮ್ಮಾ! ನೀನೆನ್ನಯ್ಯಂಗೆ ತಿಳಿವನರಿಪಿ, ಎನ್ನನೋವಲ್ ಯತ್ನಿಸದೆ, ಪಾಳು ಜೋಯಿಸರ ನುಡಿಗಳನಾದರಿಸಿ, ಒಳ್ಳಿತ್ತಲ್ತೆನ್ನದೆ ಇಂತು ಗಾಸಿ

ವಡಿಸಲೆಂತು ಮನಂ ಬಂದುದೆ? ಕೆಳದಿಯರಿರಾ! ನೀಮುಂ ಮುನ್ನಿ ನಂತೆ ಗಿಳಿಗಳಂ ನುಡಿಪಂದದೆ ಸವಿನುಡಿಗಳಿಂದೆನ್ನಂ ನುಡಿಸದೆ, ತಾಯ್ತುಂದೆಗಳ ಮತಮನೆ ಅವಲಂಬಿಸಿ, ಏಕೆ ಬಾರದಿರ್ಪಿರೆ? ಎನ ಗಾದವರೆ ಇಂತಾದೊಡಾದರಿಪರಿನ್ನಾರಿರ್ಪರೆ? ಎನ್ನಯ ಭಾಗ್ಯಮೇ ನೆನ್ನಲಹುದೆ? ಜಲಚರಾಹರಣಪರಾಯಣಂಗಳಾಗಿ ವರ್ತಿಪ ಜಲ ಪಕ್ಷಿಗಳ ಕಲಕಲಧ್ವನಿಗಳ್ ಅಯ್ದುವಾಡಾಗಿರೆ, ಮಿಾರುವ ಮು ನ್ನೀರಲೆಗಳುಲಿಗಳ್ ಮೇಳತಾಳಂಗಳಂತಿರೆ, ಅಂಬರಮಂ ತಾಗಿ ಉರವಣಿಸಿ ಪರಿವವೊಳ್ಳಿನೊಳ್ ಬೀಳ್ದು ಅಲೆಯುತಿರ್ಪ ಈ ಪೇಳಿಗೆ ತೂಗುಯ್ಯಲೆಯಂತಿರೆ, ಮೆಯ್ಸಿರೆಕೆಯ ಬಿನದಮಿಂತು ಪ್ರವರ್ತಿಸಲಾದುದೆ!" ಎಂದು ತನ್ನವರಂ ಪೆಸರಿಡಿದು ಪೆರ್ಬಸನದೆ ದಾರುಣಧ್ವನಿಯಿಂದಾರುತೆ, "ಹಾ! ಸೂರ್ಯಚಂದ್ರರೆ! ಆರ್ಯ ವರ್ಜಿತಳಪ್ಪೆನ್ನಂ ಪ್ರಾಣವರ್ಜಿತಳಂ ಮಾಡಿರೆ! ಹಾ! ದಶದಿಗೀ ಶರೆ! ಸಿಲುಕಿ ಗತಿಗಾಣದೆ ಮರುಗುವೆನ್ನ ಮೊರೆಯನಾಲಿಸಿರೆ! ಜಲ ನಿಧಿಗಳೆ! ಈ ಜಲದೊಳ್ ಬೀಳ್ದು ಸುಳಿಸುಳಿವ ಎನ್ನ ಬಳಲ್ಕೆಯುಂ ತೀರಿಸಿರೆ! ಹಾ! ನದೀಮತಲ್ಲಿಕೆ! ತಂದೆತಾಯ್ಗಳೊಲ್ಲದ ಪುಸಿಗಾರ್ತಿ ಯೆನ್ನದೆ ತಣ್ಪಾಯೆಂದು ನಿನ್ನೊಳ್ಪೊಕ್ಕೆನ್ನಂ ಪೊರೆಯಾ?" ಎಂದಿಂ ತಾರುತೆ ದಿಕ್ತಟಂಗಳ್ ಪಡಿದನಿಗುಡಲಳಲ್ ತೊಡಗಿದಳ್.

ಆ ಪೇಳಿಗೆ ಈ ಪೊಳೆಯೊಳ್ ಕರೆಯನೊಂದದೆ, ಸುಳಿಗ ಳೊಳ್ ಸಿಕ್ಕದೆ, ಪಲದೇಶಂಗಳಂ ಕಳೆದು ಪೋಪೋಗೆ, ತನ್ನದೀ ಪರಿಸರದೊಳೊಂದು ಪುಣ್ಯಾಶ್ರಮದೆ ತಪಮನಾಂತಿರ್ಪ ಮಯ ನೆಂಬ ಸಂಯಮಿಯಾದೀನಧ್ವನಿಯನಾಲಿಸಿ, "ಹಾ! ಐದೆತ್ತಣದು?" ಎನುತ್ತಂ ತಪಮನುಳಿದು ದೆಸೆಗಳಂ ಪರಿಕಿಸಿ, ಪರಿಸರವರ್ತನರತ್ತ ಣೆನಾ ಆರ್ತನಿನಾದಕೆ ಕಾರಣಮನರಿಯದೆ, ಕನಕಮಯಮಾಗಿ

ಪೊಳೆಯೊಡನೆ ಪರಿದು ಪೋಗುತಿರ್ಪ ಪೇಳಿಗೆಯಂ ಕಂಡು, ಶಿಷ್ಯರಂ ಬೆಸಸಿ, ಸನಿಹಕೆ ತರಿಸಿ, ಬೀಗಮುದ್ರೆಗಳಂ ತೆಗೆಯಿಸಿ, ಅದರೊಳಿರ್ದ ಚಿನ್ನದ ಗೊಂಬೆಯಂದದಂಗನೆಯನಾಲೋಕಿಸಿ, "ಈಕೆ ನಿದ್ರಾಹಾರರಹಿತಳಾಗಿ ಬಸವಳಿದು ನವೆದು, ಅನಿಮಿಷಾವಳಿಯನೊಲ್ಲದೆ, ಸಕಲಸುಖಾಸ್ಪದರಾಗಿ ಬಾಳ್ವ ಮನುಜರಂ ಕೂಡಿ ವರ್ತಿಸಲ್ ಬಂದಿರ್ಪಚ್ಚರಿಯೊ? ಆವಗಂ ತನ್ನಂ ನಚ್ಚಿದ ಬಕುತರೋಳ್ ಪೆರ್ಚಿದಮರ್ಷೆಯಂ ತೊಡರ್ಚುವ ಪಂಚಬಾಣ ಜನಕನಂ ಮುಂಚಿ ಧರೆಯೊಳ್ ಚರಿಸಲೈತಂದ ಲಕುಮಿಯೊ? ಜಲಧೀಶ ಪ್ರೇಷಿತೆಯಾಗಿತ್ತಲ್ವಿಹರಿಸಲೆಂದೈತಂದ ಜಲಾಧಿದೇವತೆಯೊ! ಅಲ್ಲದಿರೆ, ಈ ಕನ್ನೆಯ ಸೊಬಗಿನ ವಿಲಾಸಮಾವ ವಿಲಾಸಿನಿಯರ್ಗಿರ್ಪುದು?" ಎನುತಾರಯ್ವುತಿರೆ ತಟ್ಟನೆ ಆ ಕನ್ನೆ ಪೆಟ್ಟಗೆಯಿಂ ಪುಟ್ಟಡಿಇಡುತೆ, ತೆರೆಯಿಂ ಪೊರಮಡಿಸಲ್ ನಾಟ್ಯರಂಗಕ್ಕೈತರ್ಪ ಕೀಲ್ಗೊಂಬೆಯಂದದೆ ಪೊರಮಟ್ಟು, ಮೈಬಳಲ್ಕೆಯನಿತನಿತೆ ಕುಂದೆ, ಜರಗುವ ಮುಂಜೆರಂಗನೋಸರಿಸುತೆ, ಕಣ್ಗಳೊಳುದಿರ್ವ ಅಶ್ರುಕಣಂಗಳಂ ಚೇಲಾಂಚಲದಿಂದೊತ್ತುತೆ, ಮರಂದಾಸಕ್ತಿಭರದಿಂದರವಿಂದಮನಾವರಿಪ ಬಂಭರಂಗಳಂದದೆ ಮುಖಾರವಿಂದಮನಾವರಿಪ ಮುಂಗುರುಳ್ಗಳನಂಗುಲಿಯುಗುರ್ಗಳಿಂ ನೇವರಿಸುತೆ, ವಿನಯವಿನಮಿತೋತ್ತಮಾಂಗಿಯಾಗಿ ಪೊಡಮಡಲಾ ಮುನಿವರಂ 'ದೀರ್ಘಸುಮಂಗಲಿ ಭವ!' ಎಂದುಪರಸಿದಂ. ಆ ಆಶಿಷಮಂ ತಳೆದಾನಲ್ಲೆ, "ಮುನಿವರ್ಯರೆ, ಅದೆನಗೆಲ್ಲಿಯದು? ಕೆಟ್ಟ ಲಗುನದೊಳ್ಪುಟ್ಟಿ ಪೆತ್ತವನೆಗೆ ಕೇಡಾದೆಂ. ಅದಕ್ಕಂ ಕಿಡು ಲಗುನದೆ ನೆರೆದು ಈ ಬಾಳ್ಗೆ ಗುರಿಯಾದೆಂ" ಎಂದು ತನ್ನ ಜನ್ಮ ವೃತ್ತಾಂತಮನೆಲ್ಲಮಂ ಕೊರತೆಯಿಲ್ಲದರಿಪಿ, ವಿರಿಂಚಿಕೃತಮಂ ನಿಂದಿಸಿ, ಪೆರ್ಚಿ

ಸನದಿಂದಳಲ್ ತೊಡಗಿದಳ್. ದಯೋದಯನಿಲಯನಾದಾಮು ಯನದನೆಲ್ಲಮಂ ಬಗೆಗೊಂಡು, "ಅಮ್ಮಾ, ನೀನುಮ್ಮಳಿಸ ಬೇಡ. ಜೋಯಿಸರಾಡಿದುದನಿತುಂ ನಿಸದಮಾದೊಡಂ, ಅದೆಲ್ಲಮೆನ್ನಾಶೀ ರ್ವಚನದಿಂ ನಾಶಮಪ್ಪುದು. ನಿನಗೆ ಸೌಮಂಗಲ್ಯಮನಿಶಂ ಸಮನಿ ಸುಗುಂ. ನೀಂ ಸಾಂದ್ರಚಂದ್ರಿಕಾಸದೃಶಕೀರ್ತಿಯುಂ, ಚಕ್ರವ ರ್ತಿಯುಮಾದೊರ್ವ ರಾಜಚಂದ್ರಂಗೆ ಗೃಹಿಣಿಯೆನಿಸಿ ಚಂದ್ರ ಮತೀ ಸಮಾಖ್ಯೆಯಿಂ ಐಸಿರಿಯ ಬಲ್ಮೆ ಮೆರೆಯೆ, ಸೌಭಾಗ್ಯ ಭಾಗ್ಯಂಗಳೊಳ್ ಮಿಗೆ ಪೆರ್ಚುತೆ ಬಾಳ್ವೆಯೌ! ನಿನ್ನ ಪುಟ್ಟಿಗಂ ಟಿದ ಕೇಡುಗಳ್ಗೆಲ್ಲಂ ಮುಖ್ಯ ಚಿಹ್ನಮಾಗಿ ನಿನ್ನ ಗಳಸ್ಥಮಾದ ಮಂಗ ಳಚಿಹ್ನಮನಿನಿಯನಲ್ಲದನ್ಯರರಿಯಲಾಗದಿರ್ಪುದು" ಎಂದು ಪೇಳ್ದು ತಾಂ ದಾನವ ವಿಶ್ವಕರ್ಮನದರಿಂ ತನ್ನ ಕಲಿತನಂ ಮಿಗೆ ಮೆಚ್ಚಲ್ ತಕ್ಕ ಓರುಪ್ಪರಿಗೆಯಂ ನಿರ್ಮಿಸಿ, ಅದರೊಳಾ ಚಂದ್ರಾಸ್ಯೆ ನಿವಸಿಪಂತೆ ಸಗಿ, ಬೇಳ್ಪ ವಸ್ತುವಾಹನನಿವಹದಿಂದೊಡಗೂಡಿದ ಪಲ ತೊಳ್ತು ಗಳಂ ಕಲ್ಪಿಸಿ, ಮನಂದಣಿಯಲಾಕನ್ನೆಯಂ ಪೊರೆಯುತ್ತಿರ್ದಂ.

ಅನಿತರೊಳತಿಕಾಂತಮಾಗಿಯುಂ, ಸಮದ ಕೋಕಿಲಾರವಾ ಕ್ರಾಂತಮಾಗಿಯುಂ, ಸಂತತಾರಬ್ಧವಿಹಾರ ನರನಾರೀವಾರಕಾಂತ ಮಾಗಿಯುಂ, ನಿರಂತರ ವಿಕಸಿತಾನಂತಲತಾಂತಮಾಗಿಯುಂ, ಲತಾಂತಸ್ಯಂದಿ ಮರಂದಗಂಧಲುಬ್ಧಭ್ರಮದ್ಭ್ರಮರಾಕ್ರಾಂತ ತರುಲ ತಾವೃತಮಾಗಿಯುಂ, ವಸಂತಕಾಲಮಾಸನ್ನಮಾದುದು. ಆ ಸಮ ಯದೊಳ್ ಚಂದ್ರಮತಿಯತಂದ್ರಿತಮತಿಯಿಂ ಕೆಳದಿಯರೊಡಗೂ ಡಿ, ಆಡುತಿರ್ದೊಂದುದಿನಂ ವನವಿಹಾರದೊಳೆಳಸಿ, ಅರೆವಿರಿದ ಪುಷ್ಪ ರಸಮಂ ಪೀರ್ದು ಸೊರ್ಕುವ ಆರಡಿಗಳ ವಿಸರದ ಝೇಂಕಾರಂಗ ಳಿಂತೀವಿರ್ಪ ಬಳ್ಳಿವನೆಗಳೊಳ್ಪೊಕ್ಕಳ್. ಆಗಳಾಸರಿಮಿಂಡಿಯರ್,

ಓರೊರ್ವರ್ಗರಂ ಕರೆದು, "ಎಲೌ! ಕಲಭಾಷಿಣಿ, ಚಲಂದಳೆದ ಸುರಭಿಯರಸಂ ಪಗೆಗೊಂಡು ಮುರಿದು ಪಿಂಗಟ್ಟು ಕಟ್ಟಿ ಸೆರೆವಿಡಿದ ಶಿಶಿರನ ದಳಂಗಳೊ ಎನಲಲರ್ದೆಳೆವಳ್ಳಿಗಳಂ ಜವಳಿಸಿದ ನಿಕುಂಜಪುಂಜಂಗಳಂ ಕಂಡೆಯಾ?" ಎನುತ್ತುಂ, ವಸಂತಭೂಕಾಂತಂ ಶಾತ್ರವಶಿಶಿರಗಾತ್ರದೊಳ್ನಟ್ಟ ಪವನಾಸ್ತ್ರಕ್ಷತಗಳಿಂದುಗುವ ನೆತ್ತರ್ವನಿಗಳೆನೆ ತರುಲತಾಸಂತತಿಗಳ ಎಲೆಗಳುದಿರ್ದ ತಾಣಂಗಳೊಳ್ ಮೊಳೆವ ಅರುಣಪಲ್ಲವಾಂಕುರಂಗಳಂ ಕರ್ದುಂಕಿ ತೃಪ್ತಿಯುಪ್ಪನ್ನಂ ಮೆಲ್ಲುತ್ತೆ, ಸೊರ್ಕಿ ದನಿಗೆಯ್ವ ಪೊಕ್ಕುಳ್ವಕ್ಕಿಗಳ ದನಿಗಳ್ಗೆ ಪಡಿದನಿಗುಡುತುಂ ವಿಹರಿಸುತ್ತಿರ್ದರ್. ಆಗಳಮಲದೀಪ್ತಿಭಾಜನನಪ್ಪ ಯಾಮಿನೀಪತಿ ಉದಯಿಸಲೆಳೆಜೊನ್ನಮೆತ್ತಲುಂ ಪರ್ಬೆ, ಭೂಜಸೌಧರಾಜಿಯೊಳ್ ರಾಜಿಪ ಲತಾಂತ ಶಶಿಕಾಂತಮಣಿಸ್ಥಲಂಗಳೊರತುವೊ ಎನೆ, ಮರಂದಬಿಂದುಸಂದೋಹಂ ಸುರಿಯುತ್ತಿರ್ದುದು. ಸೆರೆಗಳೊಳ್ ಬೀಳ್ದ ಅರಿಬಳಂಗಳ್ ಪಾರಿಪೋಗಲಾಗದೆ ಮೇಲ್ಕಾಪಿರ್ಪ ಚೈತ್ರನ ದಳಂಗಳೊ ಎನೆ, ಝೇಂಕಾರತರ್ಜನಂಗಳಿಂ ಕುಜಂಗಳನಳಿಪ್ರಕರಮುಳುದಿರ್ದಿರ್ದುವು. ಪ್ರವಾಳಾಂಕುರಚ್ಛವಿಚ್ಛಟಾಸಂಘಟಿತಾರುಣಿಮಮುಂ, ಅಳಿನಿಕರ ಶ್ಯಾಮಾಗರು ಧೂಪಧೂಮಜಾಲಂಗಳುಂ, ಕುಂದಮುಕುಳಶ್ರೇಣಿಕಾ ಮೌಕ್ತಿಕ ರಂಗವಲ್ಲಿಕೆಗಳುಂ, ಕೀರರಾಜೀವಿರಾಜಮಾನಪಲಾಶ ತೋರಣಾವರಣಂಗಳುಂ, ಮಲಯಮಾರುತಾಗತ್ಯನುಕೂಲೋಪಶಾಖಾಪಲ್ಲವಾವಕಾಶವಾತಾಯನಂಗಳುಂ ಮೆರೆಯೆ ಸುರಭಿರಾಜಂಗೋಸುಗಮೆ ವನಲಕ್ಷ್ಮೀವಿನಿರ್ಮಿತಮಾದ ಚೆಂಗಾವಿದುಗುಲದ ಗೂಡಾರಂಗಳೆನೆ ಲೆಳೆದಳಿರ್ಗಳಿಂದೊಪ್ಪುತಿರ್ಪ ಗುಜ್ಜುಮಾಮರಂಗಳ್ ಕಣ್ಗೊಪ್ಪುತಿರ್ದುವು. ಆಗಳೀಚೆಲ್ವೆಯರ್ ಆರಾಮತರುವಾಟಿಕೆಗಳಂ ಪೊಕ್ಕು

ಉಗುಳ್ದು, ಒದೆದು, ತಾಗಿ, ಪಾಸಿಸಿ, ಪೊಗಮನೆತ್ತಿ ಪಾಡಿ, ಮು
ದ್ದಾಡಿ, ನಕ್ಕು, ವಕುಳ ವಂಜುಳ ಮಾಕಂದ ಸಿಂದುವಾರ ಕುರವಕ
ಚಂಪಕ ಪ್ರಿಯಾಳ ಕರ್ಣಿಕಾರ ಪುನ್ನಾಗ ತಿಲಕ ಭೂಜಂಗಳಂ ನನೆ
ಗೊಳಿಸಿ ಪಿರಿದುಂ ಸಂತಸಂಗೊಂಡು, ಚತುರೋಕ್ತಿಗಳನಾಡುತ್ತುಂ,
ಪುಷ್ಪಾಪಚಯಕ್ಕುಜ್ಜುಗಿಸಿ ಪ್ರಫುಲ್ಲಪರಿಮಳಪರೀತಪ್ರಸೂನವಲ್ಲ
ರಿಗಳನುಲ್ಲಸಂ ತೀವೆ ತಿರಿತಿರಿದು ಸೋಗಿಲ್ಗಳಂ ತುಂಬುತ್ತುಂ,
ಸೌಸವಮಂ ಪಾಸಿಸುತ್ತುಂ, ಕರ್ಗಳ್ತಲೆಯುಳುರ್ದ ಬಳ್ಳಿವನೆಗಳಂ
ಪೊಕ್ಕು ಮನೋಹರವಾದ ಸೇವಂತಿಗೆಯ ಪೂಸೆಜ್ಜೆಗಳೊಳ್ ಪವ
ಳಿಸುತ್ತುಂ, ಗುಜ್ಜುಮಾಮರಂಗಳ ಕೆಲವೊಳ್ ನೆರವಿಗೂಡಿ ನಿಲು
ತ್ತುಂ, ಕೃತಕಾದ್ರಿಗಳನೇರಿ ಅಳ್ಕಜಂ ಮಿಗೆ ಚರಿಸುತ್ತುಂ, ವಿತತ
ತರುಶಾಖಾಗ್ರಂಗಳೊಳ್ ಸೇರಿ ಕುಸುಮ ವಿಸರಂಗಳ್ ನೆಲಕುದಿ
ರ್ವಂತೆ ತೊನೆಯಿಸುತ್ತುಂ, ಬೆದರಿ ಚೆದರ್ವ ಚೆನ್ನರಗಿಳಿಗಳಂ ಕರೆ
ಯುತ್ತುಂ, ಮದಮರಾಳಂಗಳ್ಗೆ ಒಯ್ಯಾರದ ನಡೆಗಳಂ ಕಲಿಸು
ತ್ತುಂ, ಪೊಸಚಂದ್ರಕಾಂತಮಣಿ ವೇದಿಕೆಗಳೊಳ್ ಕುಳಿತು ಮಿಗೆ
ಮೆರೆದು ನೀಡುಂಬೊಳ್ತು ವಿಹರಿಸುತ್ತಿರ್ದರ್. ಅನಿತರೊಳೆ ತಮ್ಮ
ಬಳಲ್ಕೆಯಾರೆ ಜಲಕೇಳೀಲಾಲಸೆಯರಾಗಿ, ಆ ಚೆಲ್ವೆಯರ್ ಕಮಲ
ಕುಮುದವನ ಪರಿಮಳವಹನಮಾದ ಪವನಂಗಳಿಂ, ಚಕ್ರಚಕ್ರಾಂ
ಗ ಪ್ರಮುಖ ಜಲವಿಹಂಗಮ ರುತಂಗಳಿಂ, ಅರವಿಂದಸ್ಯಂದಿಮ
ರಂದರಸಪಾನಮತ್ತಮಧುಪಝೇಂಕಾರಂಗಳಿಂ, ತೀರಪಾದಪನಿಬಿ
ಡಚ್ಛಾಯಾಪ್ರಕಲ್ಪಿತಶೀತಲತ್ವದಿಂದಮುಂ, ಸುಧಾಮಧುರಾಮಲ
ಜಲಪೂರಪರಿಸ್ಫಾರವಾದ ಸ್ವರ್ಧುನೀಹ್ರದಮನನುಕರಿಸುತೆ, ಚಾ
ರುತರಮಾಗಿಯೊಪ್ಪುತಿರ್ಪ ಸ್ವಚ್ಛೋದಕಂದೀವಿದೊಂದು ಸರೋ
ವರದೆ ವಿಹರಿಸಲೆಳಸಿ, ಸರಮಂ ಕೋದಂತೆ ಓರೊರ್ವರ ಕೈಗಳಂ

ಪಿಡಿದು, ಕೊಳವೊಳಿಳಿಯಲುಜ್ಜುಗಿಸಿದರ್. ಆಗಳೊರ್ವ ಹೇಡಿ ಸರಸ್ಸಿನೊಳ್ ಪುಗಲಳ್ಕಿರಲ್, ಅವರೊಳ್ ಕೆಲ ನಲ್ಲೆಯರ್ ಮುಂಬರಿದುಬರಲಂಜಿ, ಪೆಜ್ಜೆತಪ್ಪಿಸಿ ಪಿಂತಡಿಯಿಡಲ್, ಉಳಿದ ಸರಿಮಿಂಡಿಯರ್, "ಹಾ! ಏನೆಂಬ ನಾಣ್ಜೋಡೆಯರೆ! ಆರುಮಿಲ್ಲದೆಡೆಯೊಳ್ ಪೊಳೆಗಳಂ ದಾಂಟಬಲ್ಲವರ್ ನೀವೆ ಗಡ! ಬೂಟಕಂಗಳ್ ಸಾಲ್ಗುಂ! ಸಾಲ್ಗುಂ! ಬನ್ನಿರೆ" ಎಂದು ಮರ್ಮಭೇದಕವಾಗಿ ನುಡಿದು, ಮತ್ತ ಕರೇಣುಗಳಂದದೆ ಕೊಳದೊಳ್ಪುಗಲಾ ನಲ್ಲೆಯರುಂ ಮೆಲ್ಲನಿಳಿದು ಬೆಂಗೊಂಡರ್.

ಆ ಸರಿಮಿಂಡಿಯರಾಕೊಳದೊಳ್ ಜಳಕಂಗೆಯ್ಯುತಿರಲವರ ನಗೆಮೊಗಂಗಳುಂ ನಳಿನಂಗಳುಂ; ಕಣ್ಗಳುಮಿಂದೀವರಂಗಳುಂ; ವಾಲಂಗಳುಂ ಶೈವಾಲಂಗಳುಮೊಂದನೊಂದು ಪೋಲ್ದು ಭೇದಮನೆಣಿಸಲಾಗದಂತಿರ್ದುವು. ಅವರ ಜಳಕ್ರೀಡೆಯಿನೊಗೆದ ನೀರುಲಿಗಳ್ ಈವಿಗೆ "ಗಂಧಗಜಯಾನೆಯರೆ, ಎಮ್ಮಂ ಕಲಂಕಬೇಡಿರೆ" ಎಂದಾಕೊಳಮಾರ್ದು ಬೇಡಿಕೊಳ್ವುದೊ ಎನೆ ಪಡಿದನಿಗುಡುತಿರ್ದುದು. ಇಂತಾ ಕನ್ನೆಯರ್ ಸೇದೆಯಾರಲೋಲಾಡುತಿರಲವರೊಳೊರ್ವ ಮೀನನಯನೆ ಒಡನಾಡಿಯರಂ ಮೀರಿ ಪೋಗಿ ಗಿರ್ರನೆ ಸುಳಿದು, ಮುಳುಂಗಿ, ಉಳಿದ ಕಾದಲೆಯರ್ ಅವಳೆತ್ತ ತೇಲುವಳೋ ಎಂದು ಮುಂಪಿಂದೆ ನೋಡುತಿರಲಾ ಬಿತ್ತರಿ ಎತ್ತಲುಂ ತೇಲದೆ, ಒರ್ವ ಶೈವಾಲಕಚೆಯು ಕಾಲ್ಗೆ ತೊಡರಿಕ್ಕಿ ಕೆಡೆಪಲವಳ್ ಮುಯ್ಗೆ ಮುಯ್ದೀರೆ, ಕತ್ತನೆತ್ತಿ ನೀರೊಳ್ ನಿಲಿಸಿ, ಮೋಸಂಗೊಳಿಸಿ, ಮುಳುಂಗಿಸಿ, ಬಳಲಿಸಿದಳ್. ಮೇಣೊರ್ವಳ್ ತನ್ನ ಸರಿಮಿಂಡಿಯರ ತಂಡವೊಡನೆ ಚೆಲ್ಲಾಟಕೆ ತೊಡಂಗಲೊರ್ವ ಚೆಲ್ವೆ, "ಹಾ ನಿನ್ನಂ ಮೆಚ್ಚತಕ್ಕುದೆ!" ಎಂದವಳ ಕಡೆಗೆ ನಿಂದು, ಬೆಡಂಗು

ಮೊಗದೆ ಮನಮಾರೆ ಇರ್ಕಯ್ಗಳಿಂ ನೀರನೆಗರಿಸಿ, ಸೂಸಿ, ಅವಳು ಸಿರಾಡದಂತೆ ಬಳಲಿಸಿದಳ್. ಅದಂ ಕಂಡು ಮೇಣೊರ್ವ ಕನ್ನೆ, "ಅಹುದೆ, ಅಕ್ಕ, ನಿಂತು ಸೂಸುತೆ ಪೋರಾಡುವ ಸಾಸಂ ನಿನ್ನೊಳಲ್ಲದೆ ಮೇಣೊರ್ವರೊಳ್ ಕಾಣೆನೆ!" ಎಂದು ಪೆರ್ಚಲದಿಂದಿತ್ತಲತ್ತಲ್ ಚಲಿಸಲಾಗದೆ ಸಿರ್ಕಿಸಿ ಮುಳುಂಗಿಸಿ ಬಿಟ್ಟಳ್. ಇಂತು ವಿಹರಿಸುತಿರ್ದಾ ಅರವಿಂದಮುಖಿಯರ ಮೊಗಂಗಳ್ ನೀರ ಮೇಲೆ ಕಾಣುತಿರಲಾ ಕಮಲಾಕರಕೆ ಕಮಲಾಕರಮೆಂಬೊಳ್ಪೆಸರನ್ವರ್ಥಮಾಗಿರ್ದುದು. ಕೆಲಬರಂದಗಾರ್ತಿಯರ್ ಪೂಸೆಜ್ಜೆಗಳೊಳ್ ಮಲಂಗುವ ಚೆನ್ನ ಪಸುಳೆಯರಂ ಪೋಲ್ದು, ಅಲೆಗಳುಯ್ಯಾಲೆಗಳಾಗೆ, ತೂಗಾಡುವಂತೆ ಈಸಿದರ್. ಕೆಲಬರ್ ಪಾತ್ರಮಾಡುವಂದದೆ ಕುಣಿಕುಣಿದೋಲಾಡುತಿರ್ದರ್. ಇಂತು ಪಲತೆರದೆ ಜಲಕ್ರೀಡೆಯಾಡಿ ಬಳಲ್ದಾನಾರಿಯರ್ ಕೊಳದತ್ತಣಿಂ ಪೊರಮಟ್ಟು, ತಂತಮ್ಮುಡುಗೆಗಳನುಟ್ಟು, ಸಮುಚಿತಾಭರಣಾಲಂಕೃತರಾಗಿ, ಆ ಸರೋವರದ ತೀರದೊಳೊಂದು ತಮಾಲತರುಚ್ಛಾಯೆಯೊಳ್ ವಿಶ್ರಮಿಸಿದರ್. ಆಗಳ್ ಚಂದ್ರಮತಿ ಚಂದ್ರಮತಿಗ್ರಹಣನಿಪುಣೆಯಾದ ರೋಹಿಣಿಯೊ ಎನೆ ತೊಟ್ಟ ಮಿಸುನಿಯ ಜರತಾರಿಯ ಸೀರೆಯಿಂ, ಜವಳಿಸಿ ಪೊಲಿದ ಕುಪ್ಪಸದಿಂ, ಅಮೌಲ್ಯ ರತ್ನಾಭರಣಂಗಳಿಂ, ಗಳದೊಳ್ ಸೌಸವಮಂ ಸೂಸುವ ಪೂಸರುಗಳಿಂದಮುಂ ಮಿಗೆ ಮೆರೆಯುತಿರೆ, ತುರುಂಬಿದ ತುರುಬಿನೊಳ್ ಕಮ್ಮಲರ್ ಮಘಮಘಿಸೆ, ಚೇಟಿಕಾ ನಿಕರಮಧ್ಯದೊಳ್ ತಾರಾಪಾರಪರೀತ ಚಂದ್ರಲೇಖೆಯಂತೆಸೆದಿರ್ದಳ್.

ಅನಿತರೊಳೊರ್ವ ರಾಯುಗುವರಂ ಧನುರ್ಬಾಣತೂಣೀರಧರನುಮೇಕಾಕಿಯುಮಶ್ವಾರೂಢನುಂ, ಸ್ವೇದಕಣಾವೃತಕಾಯನುಮಾಗಿ ಅಲ್ಲಿಗೈತಂದು, ವಾಹಮನಿಳಿದು, ತತ್ಸರೋವರಾಮಲ

ಜಲಮುಂ ನೀರಳ್ಕೆ ಇಂಗುವಿನಂ ಬೊಗಸೆಯೊಳ್ಕೊಗೆವೊಗೆದೀಂಟಿ, ಬಳಲ್ಕೆಯಾರೆ ಮಂದಮಾರುತ ಪ್ರಚಲಿತಶಾಖಾನೇಕವಿರಾಜಮಾನ ತರುಚ್ಛಾಯೆಯೊಳ್ ವಿಶ್ರಮಿಸಲೆಳಸಿ, ಮುಂಕಣ್ಗೊಂಡ ಕುಸುಮಕಿಸಲಯಸ್ತಬಕಸಂಶೋಭಿತ ಲತಾವಿತಾನವಿರಾಜಮಾನಮಾದ ನಿಕುಂಜಾಂತರಮಂ ಪೊಕ್ಕು, ಇನಿಸು ವಿಶ್ರಮಿಸಿ, ತನ್ನಿದಿರೊಳ್ ಕೊಳದ ಕರೆಯೊಳೆ ಹಾರಾಯಿತಚೇಟಿಕಾವಾರವೃತನಾಯಕಮಣಿಯಾಗಿ ಬೆಳಗುವ ನಾಯಿಕಾಮಣಿಯಂ ಕಂಡು, “ಈ ಮಹಾರಣ್ಯಮಧ್ಯದೊಳ್ ಈ ರಮಣೀಯಾರಾಮಮೆತ್ತಣದು? ಇತ್ತಲೀ ಚೆಲುವ ಚೆಲ್ವೆಯರ ಸಂತಾನಮಿರಲೇಕೆ? ಪರಿಕಿಸಲಿದು ಮಯನಾಶ್ರಮಮೆಂದು ತೋರ್ಪುದು. ಇತ್ತ ಪಲಸೂಳ್ ಮೃಗಯಾಪರಿಶ್ರಾಂತನಾಗುತ್ತೈತಂದು ವಿಶ್ರಮಿಸುತಿರ್ದೆಂ. ಆವಗಮುಮೀಚೆನ್ನೆ ಕನ್ನೆಯಂ ಕಂಡಪ್ಪನಲ್ತು. ಇವಳ ಚಂದಮಂ ನಿರುಕಿಸಿದಾಗಳಿಂ ಮಾನಸಂ ಚಾಂಚಲ್ಯಮಾಗಿರ್ಪುದು” ಎಂದು ಚಿಂತಿಸುತಿರ್ದೆಂ. ಆ ಯುವತಿಯುಮಾ ಅವನಿಪತಿಯಂ ನಿಟ್ಟಿಸಿ, ಎಳ್ದು, ನನೆವೋದ ಒಂದು ಪುನ್ನಾಗದ ಮರೆಯೊಳ್ಸೇರಿ, ಒರ್ವ ಚೇಟಿಯಂ ಕರೆದು, “ಆಳೀ, ಪ್ರಭಾವಿಜಿತಹೇಳಿಯಾದಾಕುಮಾರಮೌಳಿಯಂ ಕಂಡೆಯಾ? ಅವನಾವ ಕುಲದವನೊ? ಇತ್ತಲೇಕೆ ಬಂದಿರ್ಪನೊ? ಚೆಲ್ವಿಕೆಯಿಂ ಕಂತುಜಯಂತವಸಂತರಂ ಗೆಲ್ವಂತಿರ್ಪಂ! ಈ ಮೊಗದ ಅಂದಮಾತೋಳ್ದಲೆಯ ಚಂದಮೀಮೆಯ್ಯ ಮಿರುಗುಂ ಆರ್ಗಾದೊಡಮಿರ್ದಪುದೆ? ಇದರ್ೊಡೆನ್ನಮನಕೆ ಬಾರದಿರ್ಪುದೇಕೆ?” ಎನಲಾ ಇಂಗಿತಮನರಿತು, ಆಮತ್ತೇಭಯಾನೆ ಮಾನವಪಾಲಕನೆಡೆಗೆ ಸಾರ್ದು, “ಎಲೈ! ರಾಜಕುಮಾರಶೇಖರಾ, ನೀನಾರ್? ನಿಮ್ಮ ಊರಾವುದು? ಪೆಸರೇಂ? ನೀನಿತ್ತ ಬರಲೇಕೆ? ಇದು ಪ್ರಮದ

ವನಂ. ಆದರಿಂ ಪುರುಷರ್ ಬರೆ ಸಮನಲ್ತು" ಎನೆ, ನಸುನಗುತಿಂ ತೆಂದಂ—"ಲಲನೆ, ನಮ್ಮ ಪುರಿ ಸಾಕೇತಂ. ಆಂ ತ್ರಿಶಂಕುತನಯಂ. ಎನ್ನ ಪೆಸರ್ ಹರಿಶ್ಚಂದ್ರಂ. ಮೃಗಯಾಭಿರತಿಯಿಂ ದುರ್ಗಮಾರಣ್ಯ ದೊಳ್ಚರಿಸುತೆ, ಮಾರ್ಗವಶದಿಂದಿತ್ತ ಬಂದೆಂ. ಪಿರಿದು ನೀರಳ್ಕೆಯಿ ನಮೃತೋಪಮಮಾದೀಕೊಳದ ನೀರಂ ಕುಡಿದು, ಈ ತರುಚ್ಛಾ ಯೆಯೊಳ್ ಬಳಲ್ಕೆಯಾರೆ ವಿಶ್ರಮಿಸಿರ್ಪೆಂ. 'ಯಾಚಕನಾಗಿ ಕೈಚಾ ಚದಿರ್ಪುದೇ?' ಇಲ್ಲಿಗೆ ಬಂದಾಗಳಿಂದಲ್ಲಿರ್ಪಾಲೀಲಾವತಿ ಎನ್ನ ಮನಮಂ ಸೆಳೆಯುತಿರ್ಪಳ್. ಅದರಿಂದಿಲ್ಲಿಂ ತೆರಳಲಾರದಿರ್ಪೆಂ. ನೀನವಳ ವೃತ್ತಾಂತಮನರಿತಿರ್ದೊಡೆ, ಎನಗರಿಪುವುದು" ಎನಲಾ ಚೆಲ್ವೆ "ರಾಜಚಂದ್ರ, ಆ ಚಂದ್ರಾನನೆ ಎಮ್ಮೊಡತಿ. ಜ್ಯೋತಿಷ್ಮಂ ತನೆಂಬ ಭೂಕಾಂತನ ಕುವರಿ, ಮಯಮಹಾಮುನಿ ಕರುಣದಿಂ ಪೊರೆಯಲಿತ್ತಲ್ ಬಳೆಯುತಿರ್ಪಳ್; ಆಕೆಯ ಪೆಸರ್ ಚಂದ್ರಮತಿ. ಆಕೆ ನಿನ್ನೊಳ್ ಮನಮಿಟ್ಟಿರ್ಪಳ್" ಎಂದೊಡಾ ಅಂಶುಮದ್ವಂಶ ಮಣಿ ಮನದೊಳ್ ಹರ್ಷಿಸಿ, "ಹಾ! ಈಕೆ ಪರಮರ್ಷಿಕನ್ನಿಕೆ ಎನುತಿಲ್ಲದ ಸಂದೆಗಮನಾಂತು ಜಂಕಿದೆಂ. ಅಂತಿರ್ದೊಡೆನ್ನ ಮನ ಮವಳೆಡೆಗೆ ಪಿಲ್ಕುವುದೆಂತು?" ಎನುತಾರಯ್ದು, ಆ ಚೇಟಿಗಿಂತೆಂ ದಂ—"ಎಲೌ! ಚಂಚಲಾಕ್ಷಿ, ಆ ಕಾಂಚನಾಂಗಿ ಎನ್ನನೊಲಿದೊಡೆ, ಬ್ರಾಹ್ಮದೈವಾರ್ಷ ಪ್ರಾಜಾಪತ್ಯ ರಾಕ್ಷಸ ಗಾಂಧರ್ವಾಸುರ ಪೈಶಾ ಚಂಗಳೆನೆ ನೆಗಳ್ದ ವಿವಾಹಂಗಳೆಂಟರೊಳ್ ಉತ್ತಮ ಕ್ಷತ್ರಿಯರ್ಗೆ ಗಾಂಧರ್ವಮುತ್ತಮೋತ್ತಮಮಾಗಿರ್ಪುದು. ಅದು ಕಾರಣಂ ಗಾಂಧರ್ವವಿಧಿಯಿಂ ಪರಿಣಯಮಾಗಲಿಚ್ಛೈಸುವೆಂ. ಎನ್ನಭಿಮತ ಮನಾಗಭೀರನಾಭಿಗರಿಪಿ, ಈ ಕಜ್ಜಮಂ ಕೈಗೂಡಿಸುವುದು" ಎಂದು ಪೇಳ್ದಂ. ಅದಂ ಕೇಳ್ದಾ ಕಮಲನಯನೆ ಮೊಗದೊಳ್ ನಗೆಯುಗಲ್

ತನ್ನೆಡೆಗೆ ಬರ್ಪುದಂ ಕಂಡು, ಚಂದ್ರಮತಿ ತಾಂ ಪತಿಂವರೆಯಾದೊಡಂ, ತನ್ನನತಿಗರುವಿಕೆಯಿಂ ಪೊರೆಯುತಿರ್ದ ಮಯನಂ ನೆನೆದು, ಇನಿಸು ತಾಳ್ದು, ಸಖಿಯಂ ಕಂಡೊಡನೆಯೆ ಅವಳ ಮನಮುಮಂ ರಾಜನ ಮನೋರಥಮುಮನರಿತು ಮುಳಿದವೊಲಾ ಪೊಡವಿಯೊಡೆಯಂ ಕೇಳ್ವಂತೆ, "ಏನೇ! ಇನಿಸಾದೊಡಂ ಚಿಂತಿಸದೆ ಕುಲಕಾಂತೆಯರ್ ಕೇಳಲೊಲ್ಲದ ನುಡಿಗಳದಾರ್ಗಾದೊಡಂ ಕೇಳಲಹುವೇ! ಬೇಳ್ಕುಮೆಂದೊಡೆ ಎನ್ನಯ್ಯನಂ ಕೇಳಲೀಯವನೀಶಂಗೆ ತಕ್ಕುದು" ಎಂದು ಪೇಳ್ದಾ ತಾಣದೊಳ್ ನಿಲ್ಲದೆ ಘನಾಗಮದೆ ಸುರುಂಗಮುನ ರಸುವ ಹಂಸಾಂಗನೆಯೊ ಎನಲೊಯ್ಯೊಯ್ಯನೆ ಅಲ್ಲಿಂ ತೆರಳ್ದು, ಮೊಳೆಗೊಂಡ ಗುಜ್ಜುಪೊನ್ನೆಗಳ ಕೆಳಗೆ ಏಲಾವಲ್ಯಾದಿ ವಲ್ಲೀವಿತಾನಂಗಳ್ ಬಿಚ್ಚಳಿಸಿರ್ಪುದರಿನುಲ್ಲಸಿಪ ಮಂಜುನಿಕುಂಜಂಗಳಂದದೆ ಅಲ್ಲಲ್ಲಿ ಸುಳಿಸುಳಿದು ಪೋಗಿ, ಆತ್ಮನಿಲಯಮಂ ಸೇರಿ, ಉಮ್ಮಳಂ ಮಿಗೆ ಚಿಂತಿಸುತ್ತಿರ್ದಳ್.

ಅನಿತರೊಳ್ ಕಾಂತಾರದೆ ಚೆದರಿಪೋಗಿರ್ದ ಸೈನಿಕರಾ ಚಂಡಾಂಶುಕುಲಮಂಡನನಂ ಸಾರ್ದು, ಭೇರೀಪ್ರಮುಖ ವಾದ್ಯಂಗಳು ಧ್ಹಾಟಿಯಿಂ ನೆರಪಲಾ ಧಣಂಧಾಣಶಬ್ದಂಗಳ್ ಶಬ್ದಗುಣಭೇದಕಂಗಳಾಗೆಸೆದುವು. ಅದಕಾರ್ಗಮುನಿದಾರಬೃಂದಂಗಳ್ ತತ್ತರಂಗೊಂಡು ಮಯನಂ ಸಾರ್ದು, "ದಯಾಮಯಾ, ಈ ಮಹಾರಾವಕೆ ಕಾರಣಮನಾರಯ್ದು, ನಮ್ಮ ಬೆಗಡಂ ಪೋಗೊಳಿಪುದು" ಎನಲಾ ತಪೋಧನನಾತ್ಮೀಯ ದಿವ್ಯದೃಷ್ಟಿಯಿಂದದನರಿತು, ಇಕ್ಷ್ವಾಕುಕುಲಕಲಶೋದಧಿಚಂದ್ರ ಹರಿಶ್ಚಂದ್ರನ ಬರವಿನಿಂದೊಗೆದ ನಿನದಮೆಂದು ಪೇಳ್ದು, ಇದರಿನಾವಳ್ಕುಮಿಲ್ಲೆಂದುಸಿರ್ದು, ಶಿಷ್ಯಗಣಮನುನುಗಮಿಸಲಾಮನುಜೇಂದ್ರನಿಳಿದಿರ್ದೆಡೆಗೈತಂದು, ಸನಿಹದೆ ಕಾಣಲ್

ತುರಿಪದಿಂದಿದಿರ್ಗೊಂಡೆರಗುವ ರಾಜನಂ ಪರಸಿ, ಸಮುಚಿತಾತಿಥಿ ಸತ್ಕಾರಂಗಳಿಂದುಪಚರಿಸಿ, "ರಾಜಪುಂಗವ, ನಿನ್ನ ಜನಕನಿದಿರೊಳಿ ಧರಾಧ್ಯಕ್ಷನಾದೆಯೆಂಬುದಂ ಕೇಳ್ದಂದಿನಿಂ ನಿನ್ನಂ ನೋಡಲಿಚ್ಛೆ ಎನಗಿರ್ದುದು. ಅದು ದೈವಿಕಮಾಗಿ ಇಂದಿನ ಕಾಲಕೆ ಕೈಗೂಡಿ ದುದು. ನಿನ್ನಂದದ ರಾಜಶ್ರೇಷ್ಠಂಗೆ ಆತಿಥ್ಯಮನೀಯಲಾನೆನಿತು ಸುಕೃತಮನೆಸಗಿರ್ದೆನೊ! ಎನ್ನ ಕೊರತೆಗಳೆಲ್ಲಮುಂ ನೀಗಿದುವು" ಎನಲಾ ಉರ್ವೀಶಂ, "ಮುನಿವರಾ, ಸರ್ವಜ್ಞರಪ್ಪ ನಿಮ್ಮನುಗ್ರಹ ದಿಂದಜ್ಞಗಾದೊಡಂ ಕೊರತೆಗಳಿಲ್ಲದಿರೆ, ನಿಮಗೆ ಕೊರತೆಗಳೆತ್ತ ಣವು? ನಿಮ್ಮ ಕರುಣೆಗೆ ಪಾತ್ರನಾದೆನದರಿಂ ತೇನತೇನಮುದಕ್ಕೆ ತಕ್ಕುದೆನಿಪ ಮೇಲಾಂಪೆನೆಂದೆಣಿಸುವೆಂ" ಎಂದು ಬಿನ್ನೈಸಿ ಪೊಡಮ ಟ್ಟು, ಚಂದ್ರಮತಿಯೊಳ್ ತನಗೊಗೆದನುರಾಗಮನರಿಪಲ್ ನಿಜೇ ಚ್ಛಾನುವರ್ತಿಯುಪ್ಪ ಸತ್ಯಕೀರ್ತಿಯುಂ ಬೆಸಸಲಾ ಮಂತ್ರಿಸತ್ತಮ ನಾತಾಪಸೋತ್ತಮಂಗೆ ಕೈಮುಗಿದು ಮೆಲ್ಲನಿಂತೆಂದಂ—

"ಮುನೀಂದ್ರಾ, ಈ ನರೇಂದ್ರನಾಖೇಟಾಭಿರತಿಯಿಂ ಕತಿಪ ಯಾಖೇಟಕ ಪರಿವೃತನಾಗಿ, ಘೋರಾಟವಿಗಳೊಳ್ ಚರಿಸುತ್ತೆ ಗಿರಿ ಯಂ ಪೋಲ್ದ ಕಿರಿಯನೊಂದಂ ಪಿಂದಟ್ಟಿ ಬಳಲ್ದು, ಅದಂ ಕಾಣದೆ, ದಾರಿಯಂ ತಪ್ಪಿ, ಇಲ್ಲಿಗೈತಂದು, ಮನೋಹರಮಾದೀಯಾರಾಮ ಮಂ ಪೊಕ್ಕು, ಈ ಸರಸಿಯಂ ಸಾರ್ದು, ಇತ್ತಣ ಸ್ವಾದೂದಕಂಗ ಳಿಂ ತನ್ನ ನೀರಳ್ಕೆಯನಾರಿಸಿ, ಈ ನಿಕುಂಜಾಂತರದೊಳ್ ವಿಶ್ರಮಿಸಿ ನಿಮ್ಮತ್ತಣಿಂ ಮನ್ನಣೆವಡೆದಂ. ಈಗಳೊಂದು ಬಿನ್ನಪಮಿರ್ಪುದು; ಅದಂ ಚಿತ್ತೈಸಲ್ ಚಿತ್ತಮಿತ್ತೊಡೆ ಪಿಂತೆಗೆಯದೆ ಬಿನ್ನೈಸುವೆಂ" ಎನಲಾ ಮುಯುಂ, "ಇತ್ತಲೀ ಭೂಪಾಲಂ ಪಡೆಯೆ ತಕ್ಕುದಾವುದಿ ರ್ಪುದು? ಬೇಳ್ಕಾದುದೆಲ್ಲಮುಮಂ ಸಂದೆಗಮನುಳಿದು ಕೇಳ್ವುದು.

ಸಮನಲ್ತೆನ್ನದೆ ಮನನಂದನಿತುಮಂ ಕೈಕೊಳ್ವುದು" ಎನೆ ಕೇಳ್ದಾ ಪ್ರಧಾನಿ ಆನಂದಭರಿತನಾಗಿ, "ಎನ್ನೊಡೆಯಂ ನಿಮ್ಮಾಶ್ರಮದೆ ಪರಿವೇಷ್ಟಿತಚೇಟಿಕಾಪಾಲಿಕೆಯಾದ ಒರ್ವ ಬಾಲೆಯಂ ಕಂಡು, ಅವಳಂ ತನ್ನಿನಿಯಳನೆಸಗಲೂಹಿಸಿರ್ಪಂ. ಆ ಕನ್ನೆಯುದಂತಮು ನಾರಯ್ಯಲ್, ವೀರಾರಿಸೈನ್ಯವನಾರ್ಚಿಪ್ಪಂತನಾದ ಜ್ಯೋತಿಷ್ಮಂ ತನ ಪೆತ್ತ ಕುವರಿಯೆಂದುಂ, ನೀವೋವಿದ ಪಸುಳೆಯೆಂದುಂ ತಿಳಿಯಲಾದುದು" ಎಂದು ಬಿನ್ನೈಸಲಾ ತಪಸ್ಸಂಪನ್ನಂ ಸಂತಸಂ ಮಿಗೆ, "ಈ ಮಿಹಿರಕುಲಪವಿತ್ರಂಗೆ ಕಳತ್ರಮಾಗಲಾ ಮೀನನೇತ್ರೆ ಮುನ್ನೆನಿತು ನೋಂಪಿಯಂ ನೋಂತಳೋ! ಸತ್ಯಕೀರ್ತಿ, ಈ ಚಕ್ರವರ್ತಿ ಎನ್ನ ಪುತ್ರಿಯಂ ಪರಿಣಯಮಾಗಲನುಮಾನಮೇತಕೆ? ಗಾಂಪನುಮಿದಕನುಮತಿಸದೆ ಪೋಪನಲ್ತು. ನಿಮ್ಮೊಡೆಯನಿಂದುಂ ಮರುವಗಲುಮಿಲ್ಲಿರ್ದು, ಎನ್ನಳಿಯನಾಗಿ ತೆರಳಲ್ ಸಮನಪ್ಪುದು" ಎಂದು ಪೇಳ್ದು ತನ್ನ ತಪಸ್ಸಾಮರ್ಥ್ಯದಿಂ ಪರಿಣಯಕೆ ಬೇಳ್ಪ ಸಂಭಾರಂಗಳನೆಲ್ಲಮುಮನಾಗಳೆ ಸಮನಿಸಿ, ತದಾಶ್ರಮವಾಸಿಗಳಪ್ಪ ತಾಪಸರ್ಕಳಂ ಬರಿಸಿ, ಅವರನುಮತಿಯಿಂದಂದಿನ ಮರುವಗಲೆ ವಿವಾಹಮುಹೂರ್ತಮಂ ಸಂಘಟಿಸಿ, ಇನಿಸುಂ ತಡೆಯದೆ, ತತ್ತತ್ಕಾರ್ಯಂಗಳೊಳ್ ಪ್ರವರ್ತಿಸಲನುವರ್ತರಪ್ಪ ಅಂತೇವಾಸಿಗಳಂ ಬೆಸಸಿದಂ. ಹರಿಶ್ಚಂದ್ರನಾ ಆಶ್ರಮದ ಸನಿಹದೊಳೆ ಮಯನಿರ್ಮಿತವಾದ ಜರತಾರಿಯ ದುಗುಲದ ಗೂಡಾರಂಗಳೊಳ್ ಪರಿವಾರದೊಡನೆ ಬೀಡುಗೊಂಡಂ.

ಅತ್ತ ಚಂದ್ರಮತಿ ಆ ರಾಜಚಂದ್ರನ ಮೇಲಣ ಅಳ್ತಿಮಿಗಲು ತಾಪದಿಂ ಪೊರಳುತಿರ್ದಳ್. ಆಗಳೊರ್ವ ಸಖೀಲಲಾಮೆ ಅತಿವೇಗದಿಂದೋಡಿಬಂದು, ಚಂದ್ರಮತಿಯಂ ಸಾರ್ದು, "ಅಕ್ಕಾ, ನೀಂ

ಚಿಂತಿಸಲೇಕೆ? ನೀನಿತ್ತ ಬಂದ ಬಳಿಕ್ಕೆ ನಾನತ್ತಲೇಂ ನಡೆದಪುದೊ ನೋಡುವಂ ಎಂದಲ್ಲಿಯೆ ಇರ್ದೆಂ. ಆಗಳೆ ನಮ್ಮಯ್ಯ ಮಯಂ ಶಿಷ್ಯರೊಡನಲ್ಲಿಗೈತಂದು, ಆ ರಾಜಶೇಖರನಂ ನೋಡಿ, ಮನ್ನಣೆಯ ನಿತ್ತು, ನಿನ್ನನಾತನ ಪಟ್ಟದರಸಿಯಂ ಗೆಯ್ಯಲ್ ನಿಶ್ಚೈಸಿದಂ. ಮರು ವಗಲೆ ಲಗುನಂ. ಇನ್ನು ನೀಂ ಸಂತಸಂದಾಳ್ವುದು" ಎನೆ ಚಂದ್ರ ಮತಿ ಅತಿಪ್ರೀತಿಯಿಂದಾಯುವತಿಯನಾಲಿಂಗಿಸಿ, ಸಮುಚಿತೋಕ್ತಿ ಗಳಿಂದಾದರಿಸಿದಳ್.

ಆಗಳ್ ರಂಜಿಪ ಸಂಜೆಯ್ಯೆತರಲಂಶುಮಂತಂ ನಿಜವಂಶಮಂ ಡನಹರಿಶ್ಚಂದ್ರಂ ಮರುವಗಲೆ ಚಂದ್ರಮತಿಯಂ ಪರಿಣಯವಾದಪ ನೆನುತೆ ಪಾತಾಳವಾಸಿಗಳ್ಗರಿಪಲ್ ಪೊರಮಟ್ಟನೊ, ಎನೆ ಚರ ಮಗಿರಿತಟವೊಳಿಳಿದು ಪರಿದಂ. ಇನನತ್ತಣಿಂ ಪರಿಣಯೋತ್ಸವ ವೃತ್ತಾಂತಮನರಿತು ಸಾಲಾಗಿ ಬರ್ಪ ಮಾರುತಾಶನ ಶಿರೋಭಾಗಂ ಗಳೊಳ್ ಮೆರೆವ ಪದ್ಮರಾಗಮಣಿಪ್ರಭೆಗಳೆನೆ ಸಂಧ್ಯಾರಾಗವೊದ ವಿದುದು. ಚಂದ್ರಮತೀಹರಿಶ್ಚಂದ್ರರ ಮೋಹತಮಃಪುಂಜಮಂತ ರಂಗಂಗಳೊಳ್ ಇರದೆ ಪೊರಮಟ್ಟು ದೆಸೆದೀವಿದುದೊ, ಎನಲಂ ಧಕಾರಪಟಲಂ ಬ್ರಹ್ಮಾಂಡಕಟಾಹಮನಾಕ್ರಮಿಸಿದುದು. ಸಮಯ ಶಿಲ್ಪಕಾರಂ ರೋದಸೀಗೃಹದುಪರಿಭಾಗದೊಳ್ ಬಿಚ್ಚಳಿಸಿದ ಬಾನೆಂ ಬ ನೀಲಪಟವಿತಾನದೊಳ್ ಪುದುವಾಗಿ ಪರ್ಬಿದ ಬಜ್ಜರದ ಚೂರು ಗಳ್ ಮಿರುಮಿರುಗುವುವೊ, ಎನೆ ತಾರಗೆಗಳಾಗಸದೊಳ್ ಮೆರೆ ದುವು. ಮಯತನಯೆಯಂ ಪರಿಣಯಮಾಗಿ ಮಹೀಧವಂ ಬಾಂ ಧವನೆವದೆ ರಾವಣನಂ ಸೇರದಿರಲ್ ಮುನ್ನಮೆ ನೇಹಮೆಸಗಿ ತನ್ನ ನೊಳಕೊಳಲ್ ಬಲಭೇದಿ ಉಪಧೆಯಾಗಿ ಕಳುಹಿದ ಅಮೃತ ಘಟವೊ, ಎನಲಮೃತಕರನುದಯಶಿಖರಿಶಿಖರಮನಲಂಕರಿಸಿದಂ.

ಬ್ರಹ್ಮಾಂಡ ವೈವಾಹಿಕ ಮಂಟಪಕೆ ಬೆಳ್ಳಿಯ ಲೇಪ್ಯಮಂ ಮಾಡಿದಂ ದದೆ, ಜೊನ್ನಮೆಲ್ಲೆಡೆಯೊಳುಂ ಪರ್ಬಿ ಕಣ್ಗಳ್ಗೆ ಹಬ್ಬಮೆಸಗಿದುದು. ಅನಿತರೊಳ್ ಮುಂಬಗಲಿಂಬಾಗಲ್ ಒಯ್ಯೊಯ್ಯನೆ ವಾತಾಯನ ಮಾರ್ಗಂಗಳೊಳ್ ಕಿರುಗಾಳಿ ಬೀಸೆ, ಕುಕ್ಕುಟಂಗಳ 'ಕು ಕ್ಕೊ ಕೂ' ಎಂಬ ಕೂಗುಗಳೊಡನೆ ವೈತಾಳಿಕರ ಪ್ರಾಭಾತಿಕ ಗೀತಾರ ವಂಗಳೆಸೆದುವು. ಜಾರಚೋರವಾರಂಗಳ್ ಜುಣುಗೆ, ತಾರಗೆಗಳ್ ತರತರವಾಗಿ ಕಣ್ಮರೆಯಾದುವು; ಕೈರವೇಂದೀವರಂಗಳ್ ಕಳೆ ಗುಂದೆ ಸಕಲಜನಾನನಕಮಲಂಗಳ್ ವಿಕಸಿಸಿದುವು. ಚಂದ್ರಮತಿ ಗಳದೆ ಕಟ್ಟುವ ತಾಳಿ ಬಳಿಕಾರ್ಗಂ ನೋಡಲಾಗದುದರಿಂದೀಗಳೆ ಭೂಪುರಂದರಂ ಎಲ್ಲರ್ಗಮೆತ್ತಿತೋರ್ಪನೊ, ಎನೆ ತರಣಿ ಉದ ಯಗಿರಿಶಿಖರದೊಳುದಯಿಸಿದಂ.

ಇಂತು ಸೂರ್ಯೋದಯವಾಗೆ, ಮುಯಂ ತನ್ನ ತಪಶ್ಶಕ್ತಿ ಯಿಂದಾ ಆಶ್ರಮಮಂ ಮಹಾರಾಜ ರಾಜಧಾನಿಯಂ ಪೋಲ್ದ ಗಗನ ಸ್ಪೃಕ್ಸೌಧರಾಜೀವಿರಾಜಮಾನಮಂ ಗೆಯ್ದು, ಶಿಷ್ಯಗಣಮಂ ಕಳುಪಿ, ಸೂರ್ಯಚಂದ್ರಾನ್ವಯಾಭರಣರಪ್ಪ ರಾಜನ್ಯರುಮಂ, ಶಿಷ್ಯಪ್ರ ಶಿಷ್ಯಸೇವಿತರಪ್ಪ ಬ್ರಹ್ಮಸನ್ನಿಭ ಬ್ರಹ್ಮರ್ಷಿಗಣಮುಮಂ ಬರಿಸಿ, ಸಮುಚಿತಾಲಂಕಾರಭಾಸುರರಪ್ಪ ವಧೂವರರಂ ಪರಿಣಯವೇದಿಕಾ ಸಮಾಸೀನರಂ ಗೆಯ್ದಂ. ಆಗಳಪರಿಮಿತ ಮುನಿಗಣಾಶೀರ್ವಾದ ನಿನಾದಂಗಳುಂ, ಪುರೋಹಿತಕೃತ ಸ್ವಸ್ತಿವಾಚನನಿನದಂಗಳುಂ, ರಂ ಭಾಸಮರಂಭೋರೂಕೃತಲಾಸ್ಯನಿಸ್ವನಂಗಳುಂ, ಗಾಯಕವಾತಕ ಪ್ರಕಟಿತ ಸಂಗೀತಸ್ವನಂಗಳುಂ, ಭೇರಿಕಾಪಟಹ ತಮ್ಮಟಪ್ರಮು ಖ ವಾದ್ಯಘೋಷಂಗಳುಂ, ವಂದಿಮಾಗಧಸ್ತವನಿರ್ಘೋಷಂಗಳು ಮೊಂದಾಗಿ ಮುಸಗಿ, ದಿಕ್ತಟಂಗಳೊಳ್ ಪಡಿದನಿಯೊಗೆವಂತೆ ಅತಿ

ವೈಭವಾನ್ವಿತವಾಗಿ ಚಂದ್ರಮತೀಹರಿಶ್ಚಂದ್ರರ ವೈವಾಹಿಕಮಹೋತ್ಸವಂ ನೆರವೇರಿದುದು. ಅಂತು ಮಹಾ ವಿಭವಾನ್ವಿತವಾಗಿ ಸಕಲ ವೈವಾಹಿಕ ಕ್ರಿಯೆಗಳ್ ಯಥಾವಿಧಿಯಿಂ ನಡೆಯೆ, ಜಟಾಧರರೆರೆಯು ನಾಮಯಂ, ಮಣಿಮಯಾಂಬರಾಭರಣಂಗಳುಂ, ಅನ್ನಪಾನೀಯಾದಿಗಳುಂ, ಮೊದಲೆನಿಪ ಉಪಚಾರಂಗಳಿಂ ರಾಜರುಮಂ, ದ್ವಿಜರಾಜರುಮಂ ತಣಿಸಿ ಮರ್ಯಾದೆಯಿಂ ತತ್ತನ್ನಿವಾಸಂಗಳ್ಗೆ ಬೀಳ್ಕೊಟ್ಟು, ವಧೂವರರ್ಗಸಂಖ್ಯಾತ ವಸ್ತುವಾಹನನಿವಹಂಗಳಂ, ಅನೇಕ ಸಹಸ್ರ ದಾಸದಾಸೀಜನಂಗಳಂ, ಅತುಲಿತ ರಥಗಜ ಪದಾತಿವರ್ಗಂಗಳಂ ಬಳುವಳಿಯಾಗಿತ್ತು, ಅಳಿಯನಂ ಕಂಡು, "ಸಾರ್ವಭೌಮ, ಮುನ್ನೆನ್ನ ತಪಶ್ಶಕ್ತಿಯಿಂದೊರ್ವ ಶಕ್ತಿಯುಂ, ಮೇಣೊಂದು ಚಂದ್ರಹಾಸಮುಮಂ ಪಡೆದೆಂ. ಅದರೊಳ್ ಅಪ್ರತಿಹತಮಪ್ಪ ಶಕ್ತಿಯಂ ನಕ್ತಂಚರೇಶ್ವರನಾ ರಾವಣಂಗೆ ಔರಸಪುತ್ರಿ ಮಂದೋದರಿಯನಿತ್ತಸಮಯದೊಳಿತ್ತೆಂ. ಈಗಳೀಪೊರೆದ ಮಗುವಂ ನಿನಗಿತ್ತೆನದರಿಂ ಸರ್ವಶತ್ರುನಿರಾಸಭಾಸುರವಾಗಿಯೊಪ್ಪುವ ಈ ಚಂದ್ರಹಾಸಮಂ ನಿನಗೀವೆಂ. ಇದಂ ಕಯ್ಯೊಳ್ ಪಿಡಿದಿರೆ ನಿನ್ನನೆಂತಪ್ಪ ಶೂರನುಂ ಜಯಿಸಲಳವಲ್ತು" ಎಂದು ಪರಸಿ ಕೊಡಲಾ ಹರಿಶ್ಚಂದ್ರನತಿ ಭಕ್ತಿಯುಕ್ತನಾಗುತೆ ನಮಸ್ಕರಿಸಿ, ಅದಂ ಕೈಕೊಂಡಂ. ಈ ರಾಜಂಗೆ ಬೇತಾಳವಟದ ಕೆಳಗಿರ್ದೆಡೆಯೊಳ್ ನಕ್ಷತ್ರಕ ಸಮೇತ ಪುತ್ರಕಳತ್ರರಂ ಕಾಯ್ವುದಕ್ಕೊದವಿದ ಸಾಧನಮದೆ ಗಡ! ಇಂತು ಮಯನತ್ತಣಿಂದಾ ಪರಮ ಸಾಧನಮಂ ಪಡೆದು ಪ್ರಿಯವಧೂಸಮೇತನಾಗಿ, ಸಾಕೇತಪುರಕ್ಕೆ ತೆರಳಲಾ ಮುನೀಂದ್ರನಪ್ಪಣೆಯಂ ಪಡೆದು ಪೊರಮಡಲ್, ಚಂದ್ರಮತಿ ಪೆತ್ತವರೊಲ್ಲದ ತನ್ನನಿನಿತುದಿನಮಮಿತಾನುಕಂಪೆಯಿಂ ಪೊರೆದು, ಸಕಲೈಶ್ವರ್ಯಸಂಪನ್ನೆ

ಯುಂ ಗೆಯ್ದು ಮಯನಂ ಬಿಟ್ಟುಪೋಗಲ್ ಮನಂ ಬಾರದೆ, ಮೊಗಂ ದೀನಭಾವಮನೊಂದಿ, ಕಣ್ಗಳೊಳ್ ನೀರ್ ತುಂಬುವುದಂ ಕಂಡು, ಮಯಂ "ಮಗುವೆ, ನೀಂ ಚಿಂತಿಸಲೇಕೆ? ಪುಟ್ಟಿಗಂಟಿದ ಕೇಡು ಗಳೆಲ್ಲಂ ಮಾಣ್ದುವು. ಸರ್ವ ಸರ್ವಂಸಹಾಧ್ಯಕ್ಷನಾದ ಇಕ್ಷ್ವಾಕು ಕುಲತಿಲಕನಂ ಕೈವಿಡಿದೌ! ಇಳೆಯೊಳಿರ್ಪೆಲ್ಲ ರಾಜಮಹಿಷಿಯರುಂ ನಿನಗೆ ದಾಸಿಯರಾಗೆ, ಮಿಗೆ ಪೆರ್ಚುವ ಸಿರಿಯೊಳ್ ಬಾಳ್ವೆಯೌ. ಮುನ್ನಿನ ಜೋಯಿಸರ ನುಡಿಗಳ್ ನಿಸದಮೆನಿಸಿ, ಆಪತ್ತುಗಳಾಪಾ ದಿಸಿದೊಡಂ, ಎನ್ನಯ ಆಶೀರ್ವಾದದ ಬಲ್ಮೆಯಿಂ ಮಿಹಿರೋದಯದ ಮಿಹಿಕಾಪಟಲದಂದದೆ ಅಚಿರಕಾಲದೊಳೆ ಬಟ್ಟಬಯಲಾಗಿ ಪೋದ ಪುವು. ನೀನುಂ ನಿನ್ನಿನಿಯನುಂ, ಆ ಇಂದಿರಾ ಮಂದರಧರರಂದದೊ ಳೆಲ್ಲ ಸಿರಿಗಳ್ಗುಮಿರವಾಗಿ, ಮಾರನಂದದ ಕುವರನನತಿ ಸುಕುಮಾ ರನಂ ಪಡೆದು, ಕೀರ್ತನೀಯರಾಗಿ ವರ್ತಿಪಿರ್. ಆನನ್ನನ್ನೆಗಂ ನಿಮ್ಮ ಪೊಳಲ್ಗೈತಂದು ಕುಶಲಮನಾರಯ್ವುತಿರ್ಪೆಂ" ಎಂದು ತಕ್ಕೈಸಿ ಪ್ರೀತಿಪುರಸ್ಸರಮಾಗಿ ಬೀಳ್ಕೊಟ್ಟಂ. ಅಂತಾಚಂಡಾಂಶುಕುಲಮಂ ಡನಂ ಸತೀಸಮೇತನಾಗಿ ಮಯನತ್ತಣಿನಾಣತಿಯಂ ಪಡೆದು, ಸಂಜ್ಞಾಸಹಚರನಾದ ದಿನಕರನಂ ಪೋಲ್ದು, ಉದಯಶಿಖರಿಯಂ ದದೆ ಬೆಳಗುವ ಮಿಸುನಿಯ ತೇರನೇರಿ, ಚತುರಂಗಬಳಂಗಳ್ ಬಳ ಸುತ್ತೈತರಲ್, ಕದಲಿ ನಿಜನಗರಮಂ ಸಾರ್ದು, ಪುರಂದರ ವೈಭವ ದೊಳ್ ಪುರಪ್ರವೇಶಮಂ ಗೆಯ್ದು, ಅನುರೂಪ ಗುಣಶೀಲವತಿ ಯಾದ ಚಂದ್ರಮತೀ ಸತಿಯಂ ಕೂಡಿ, ಇಷ್ಟೋಪಭೋಗಂಗಳನ ನುಭವಿಸುತೆ, ಸತ್ಯವ್ರತ ನಿಷ್ಠಾಗರಿಷ್ಠನಾಗಿ ರಾಜ್ಯಮಂ ಪಾಲಿಸುತೆ, ಚಿರಕಾಲಕೆ ಅಕಳಂಕ ಕುಮುದಹಿತಾಸ್ಯ ಲೋಹಿತಾಸ್ಯನಂ ಪಡೆ ದು, ತದೀಯಶೈಶವಕ್ರೀಡಾವಿನೋದಂಗಳೊಳ್ ತೇಲುತ್ತಿರ್ದಂ.

"ಅಂತಹ ಸಮಯದೊಳ್ ಮರ್ತ್ಯಲೋಕವಾಸ್ತವ್ಯರಪ್ಪ ಪರಮ ಮುನಿಗಳನೇಕರೊಂದಾಗಿ ತ್ರಿದಶಾಲಯಕ್ಕೈತಂದು, ಅಲ್ಲಿ ಅಮರ್ತ್ಯನಾಥಂ ಮರ್ತ್ಯಲೋಕದೊಳ್ ನುಡಿದಪ್ಪದಿಳೆಯಾಣ್ಮನಂ ಪೇಳಿರೆನೆ, ನಾನೀತನಂ ಗುರಿವಿಡಿದೆಂ. ಅದಂ ಪರಿಕಿಸುವನಾಗಿ ಕೌಶಿಕನಾಶುನಾಸೀರನಿದಿರೊಳ್ ಹರಿಶ್ಚಂದ್ರನಂ ಬೊಂಕಿಸುವೆನೆಂಬ ಬಿಂಕಮನುಸಿರಿ, ಬಳಿಕ್ಕೆ ತೇನತೇನಂ ಎಡರ್ಗಳೊದವುವಂತೆಸಗಿದಂ" ಎಂದೊಕ್ಕಣಿಸಿದರುಂಧತೀಪತಿಗೆ ಕೈಮುಗಿದು ಸುಯಜ್ಞಂ, "ಸರ್ವಜ್ಞ, ನಿಮ್ಮನುಗ್ರಹದೆ ಚಂದ್ರಮತೀ ವೃತ್ತಾಂತಮನೆಲ್ಲಮನರಿದೆಂ. ಆದೊಡಂ, ಆರ್ಯರ್ಗೆ ಆರ್ಯನುಂ, ಸತ್ಯಸಂಸ್ಥಾಪಕಾಚಾರ್ಯನುಂ, ಪ್ರತ್ಯಕ್ಷೀಕೃತಪುಂಡರೀಕಾಕ್ಷನುಮಾದೀವಸುಂಧರಾಧ್ಯಕ್ಷಂ ಸಾಮಾನ್ಯರಾಜನ್ಯರಂತೆ ಅಳವಲ್ಲದ ಎಡರ್ಗೊಳಗಾಗಲ್ ನೀವೀಗಳೊಕ್ಕಣಿಸಿದ ಚಂದ್ರಮತೀ ವೃತ್ತಾಂತಮೆ ಕಾರಣಮಾದುದೆ? ಅದೆಂತು?" ಎನೆ ವಸಿಷ್ಠನಾವರಿಷ್ಠಂಗಿಂತೆಂದಂ –

ಪೊಡವಿಗೆ ತೊಡವೆನಿಸಿ ಅವಂತಿಯೆನೆ ನೆಗಳ್ದ ಪೊಳಲೊಂದಿರ್ಪುದು. ಅದು ಮಣಿಮಯಗೋಪುರ ಪ್ರಾಕಾರಸೌಧರಾಜೀವಿರಾಜಮಾನಮಾಗಿರ್ಪುದು. ಅದನುಗ್ರಕರನಂ ಪೋಲ್ತು, ಸುನಿಶಿತಮಂಡಲಾಗ್ರಕರನಾಗಿ, ಕಳಾನಿಧಿಯಂ ಪೋಲ್ತು, ಧನುಃಕಳಾನಿಧಿಯಾಗಿ, ನಲನಂ ಪೋಲ್ತು, ವಿಮತಮಹೀಪಾಲಕರ್ಗೆ ದವಾನಲನಾಗಿ, ಸಮುಪಾಸಿತ ನೀಲಲೋಹಿತನಾದ ನೀಲಲೋಹಿತನೆಂಬ ನೊರ್ವನರಸಂ ಪಾಲಿಸುತ್ತಿರ್ದಂ. ಆತನ ಮನ್ನಣೆಗೆ ಪಾತ್ರನಾಗಿ ಸಕಲಗುಣಭದ್ರನಾದ ಜವಭದ್ರನೆಂಬ ಹಾಲಿಕನೊರ್ವನಾಪೊಳಲೊಳಿರ್ದಂ. ಅವಂ ಧನಧಾನ್ಯ ಗೋಗಣ ಮಣಿಭೂಷಣಾವಳಿಗಳೊಳ್ ಗಣನೀಯನಾಗಿರ್ದು, ಚಿರಕಾಲಕೊರ್ವ ಕುವರನಂ

ಪಡೆದಂ. ಆ ಕುವರಂ ಲತೆಗೆ ಪೂದೊಡಂಬೆಯಂತೆ, ಆ ಕೃಷೀವಲಂಗೆ ಜನಿಸಿ, ದೂರೀಕೃತಾತ್ಮೀಯಪ್ರಾಭವನಾದೊಡಂ, ಅತಿಶಯಿತರೂಪಸಂಪತ್ತಿಯಿಂದಾತ್ಮಪ್ರಭವನಂ ಧಿಕ್ಕರಿಸುತೆ, ಗರುವಿಕೆಯಿಂ ಬಳೆಯುತಿರೆ, ಯೌವನಸಂಪತ್ತಿಯುಂ ಪ್ರಾಪಿಸಿದುದು.

ಆಗಳ್ ತಜ್ಜನಕನನುರೂಪಕುಲವಯೋರೂಪವತಿಯಾದೊರ್ವ ಲೀಲಾವತಿಯಂ ತಂದು, ಆ ಅಣುಗಂಗೆ ಪರಿಣಯಮನೆಸಗಿದಂ. ಆಕೆ ಕಲಸ್ವನದೆ ಕಲರವಂಗಳ್ಗೆ ಕಳವಳಮನೆಸಗುತೆ, ಕಲಕಂಧರಾಭಿಖ್ಯೆಯಿಂ ವಿಖ್ಯಾತಳಾಗಿ, ಲುಬ್ಧಂಗೆ ಲಬ್ಧಮಾದ ಪೆರ್ನಿಧಾನದಂದದೆ ಆ ಹಾಲಿಕಬಾಲಕಂಗೆ ಪತ್ನಿಯಾಗಿ, ಕೆಳದಿಯರೊಡಗೂಡಿ, ರಾಟ್ಣಂಗಳಿಂ ನೂಲುತ್ತೆ, ಕಾಲಮಂ ಕಳೆಯುತ್ತಿರ್ದಳ್.

ಅಂತಹ ಸಮಯದೊಳೊಂದುದಿನಮಾನೆಲದೊಡೆಯನಾದ ನೀಲಲೋಹಿತಂ ಪೊರಮಟ್ಟು, ಚತುರಧಾಟೀಪಟಮಮಾದ ಘೋಟಕಮನಾರೋಹಿಸಿ, ಇರ್ಕೆಲದೊಳ್ ವರವಾಹಿನೀಶ್ವರಬೃಂದಂಗಳೋಲಗಿಸಿ ಬರಲಗ್ರಭಾಗದೊಳ್ ವಂದಿಮಾಗಧಸ್ತವಂಗಳುಂ, ತೌರ್ಯತ್ರಿಕರವಂಗಳುಂ ಮಸಗೆ, ಮಹೇಂದ್ರವೈಭವದೊಳ್ ರಾಯಗೇರಿಗೈತರಲಾಬಿನದಮಂ ನೋಡುವ ಬಯಕೆಯಿಂ ಪುರಾಂಗನೆಯರುತ್ತುಂಗ ಸೌಧಾಗ್ರಂಗಳೊಳ್ ಸೇರುತ್ತೆಯುಂ, ಪ್ರತಿಗೃಹದ್ವಾರವಿತರ್ದಿಕಾತಲಂಗಳೊಳ್ ಸಾಲ್ಗೊಳುತ್ತೆಯುಂ, ಜಗುಲಿತಲಂಗಳೊಳ್ ಜಂಗುಳಿಗೂಡಿ ಓರೊರ್ವರಂ ತಲೆಮೀರಿ ನೋಡುತ್ತೆಯುಂ, ಕೋಲಾಹಲಧ್ವನಿಗೆಯ್ಯುತೆ ಬೆರಗಾದರ್. ಆಗಳೀ ಒಕ್ಕಲಿತಿ ಕಲಕಂಧರೆಯುಂ ಎಕ್ಕುವುದನುಳಿದು, ಒಡನಾಡಿಯರುಂ ತಾನುಂ ತಟ್ಟನೆ ಪೆರ್ಬಾಗಿಲ್ಗೈತಂದು, ಮನಮಾರೆ ಭೂಕಾಂತನಂ ನಿಟ್ಟಿಸಲರಸನುಮವಳನೀಕ್ಷಿಸುತಿರ್ವರುಂ ಪರಸ್ಪರಾನುರಾಗಬದ್ಧರಾದರ್. ಒಡ

ನೆಯೆ ರಾಯುಗುವರಂ ತನ್ನ ಪೊರವುಟ್ಟ ಕಜ್ಜಮನುಳಿದು, ಓಲಗಕ್ಕೈ ತಂದು, ಸಕಲ ಪರಿವಾರಮಂ ಸರಭಸಗತಿಯಿಂ ಬೀಳ್ಕೊಟ್ಟು, ಏಕಾಂತ ಸ್ಥಳಮಂ ಸೇರಿ, ಕುಂಟಣಿಯನೊರ್ವಳಂ ಬರಿಸಿ, ತನ್ನ ಮನೋಗತಮನರಿಪಲಾ ಶಂಭಳಿಯುಮಾನೆಲದಾಣ್ಮನ ಬಯಕೆ ಯಂ ಕೈಗೂಡುವಂತೆಸಗಲಾಮದಾಂಧಂ ಧರ್ಮದ ತೆರನರಿಯದೆ, ಆ ಬೆಳಸುದೊರೆಯಂ ಸೆರೆವಿಡಿದು, ಅವನವರನೆಲ್ಲರಂ ಪೊಲೆಯರ್ಗೆ ತೊಳ್ತುಗಳಾಗೆ ಮಾರಿಸಿ, ಸರ್ವಸ್ವಮಂ ಸೂರೆಗೊಂಡು, ಕಲಕಂಧರೆ ಯಂ ನಿಜನಿಲಯದೊಳೆ ಇರಿಸಿಕೊಳಲ್, ಆ ಎಡರ್ಗಳಂ ತಾಳಲಾ ಗದೆ ಜವಭದ್ರನುರಲಿಂ ಪಂಚತ್ವಮನೊಂದಿದಂ. ಅವನ ತೆತ್ತಿಗರಾ ಬಾಲವೃದ್ಧರಾಗಿ ಅಗ್ನಿಪ್ರವೇಶಮಂ ಗೆಯ್ದರ್. ಇಂತು ಕಲಕಂಧರೆ ವಸುಂಧರಾಧಿಪನಂ ಸೇರಿ, ಅತ್ತೆಯ ಮನೆಯಂ ಸಹಮೂಲಮಾಗಿ ಪಾಳ್ಗೆಯ್ದು, ಮನಶ್ಶಲ್ಯಮನುಳಿದು ಯಥೋಚಿತ ಲೀಲಾವಿಹಾ ರಂಗಳೊಳ್ ಕಾಲಯಾಪನಮಂ ಗೆಯ್ಯುತ್ತಿರ್ದಳ್.

ಬಳಿಕ್ಕೆ ಶರತ್ಸಮಾಗಮದೆ ಪುರದೊಳ್ ಕೇದಾರಗೌರೀವ್ರತಂ ಪ್ರವೃತ್ತಮಾದುದು. ಅದಂ ಕಂಡು ಕಲಕಂಧರಾಬಿಂಬಾಧರೆ ರಾಜ ಪುರೋಹಿತನಂ ನಿಜನಿಲಯಕ್ಕೆ ಬರಿಸಿ, ಉಚಿತವಿಧಾನದಿಂದಾತನಂ ಪೂಜಿಸಿ ಪೊಡಮಟ್ಟು, ತತ್ಕೃತಾಶೀರ್ವಚನಂಗಳಂ ತಲೆದಾಳ್ದು, ಮುಕುಳಿತ ಕರಸರೋರುಹಳಾಗಿಂತೆಂದಳ್.

"ಎಲೈ! ಭೂಸುರಾಗ್ರಣಿ, ಈಗಳೀಪೊಳಲಿನ ಚೆಲ್ವೆಯರದಾ ವುದೊ ವ್ರತಮನಾಚರಿಸುವ ಚಂದಮೇರ್ಪಡುತಿರ್ಪುದು. ಅದಾ ವುದು? ಅದನಾಚರಿಪ ವಿಧಾನಮೆಂತು? ಅದರಿಂದೊಗೆವ ಫಲಮಾ ವುದು? ಅದು ಮುನ್ನಾರಿಂದಾಚರಿತಮಾದುದು? ಸವಿಸ್ತರಮಾಗೆ ನಗರಿಪಲ್ ಬೇಡುವೆಂ" ಎನಲಾಪಾರ್ವಂ, "ಅದು ಕೇದಾರೇಶ್ವರ

ವ್ರತಂ. ಅದಂ ಮುನ್ನಂ ಪಾರ್ವತಿಯಾಚರಿಸಿ ಪರಮೇಶ್ವರನ ರ್ಧಾಂಗಮಂ ಪಡೆದಳ್. ಬಳಿಕಮನೇಕ ನಿರ್ಜರಸ್ತ್ರೀಯರನಂತ ಭಕ್ತಿಯಿಂದಾಚರಿಸಿ, ಅಭೀಷ್ಟಸಿದ್ಧಿಗಳನಾಂತರ್. ಅದನಂತಫಲದ ಮುಂ, ದೂರೀಕೃತದುರಿತವ್ರಾತಮುಂ, ಪರಮೈಶ್ವರ್ಯಹೇತುವುಂ, ಸೇವಾಪರತಂತ್ರಜೀವಾತುವುಮಾಗಿರ್ದಪುದು. ಅದನಾಶ್ವಯುಜ ಶುಕ್ಲಪಕ್ಷ ದಶಮಿ ಮೊದಲಾಗಿ, ಕೃಷ್ಣಪಕ್ಷದ ಅಮಾವಾಸ್ಯಾ ಪರ್ಯಂತಮತಿನಿಷ್ಠೆಯಿಂದಾಚರಿಸವೇಳ್ಕುಂ. ಅದೆಂತೆನೆ, ಆ ಇರ್ಪ ತ್ತೊಂದುದಿನಮಿರುಳ್ ಮುಂಜಾವದೊಳ್ ಈಶ್ವರನನಾರಾಧಿಸಿ, ಅ ನ್ನವರ್ಜನಮುಂ, ಸಕಲಭೋಗವಿಸರ್ಜನಮುಂ, ಭೂಶಯನಮುಂ, ಪಕ್ವಫಲಾಹಾರಮುಂ, ಸರ್ವದಾ ಧೌತವಸ್ತ್ರಧಾರಣಮುಂ, ಮುಖ್ಯ ನಿಯಮಮಾಗೆಸಗಿ, ಪರಗೃಹಮಂ ಪುಗದೆ, ದೇವಗೃಹಮಂ ಗೋ ಮಯದಿಂ ಸಾರಣೆಗೆಯ್ದು, ಪದ್ಮಪ್ರಕರಾನೇಕರೂಪ ವಿಚಿತ್ರಮಾದ ಮುತ್ತಿನ ರಂಗವಲ್ಲಿಗಳನಿಟ್ಟು, ಮಣಿಗಳಂ ಕೋದ ನವ್ಯಕನಕಾಂ ಬರ ವಿತಾನಮಂ ಪ್ರಸರಿಸಿ, ದ್ವಾರದೇಶಂಗಳಂ ರಂಭಾಸ್ತಂಭಂಗ ಳಿಂದಲಂಕರಿಸಿ, ಮರಕತಮಣಿತೋರಣಂಗಳಂ ಕಟ್ಟಿಸಿ, ಭಕ್ತಿ ಮಿಗೆ ವಿಜಯದಶಮಿ ದಿನದೊಳುಪವಸಿಸಿ, ಅಂದಿನ ಸಂಜೆಯೊಳ್ ಹಾಟಕಕಲಶಸ್ಥಾಪನಮಂ ಮಾಡಿ, ಅದರೊಳ್ ಗೌರೀಶಂಕರರನಾ ವಹಿಸಂತೆಸಗಿ, ಮುಂಬಗಲ್ ಮಾಳ್ದ ಪಿಷ್ಟಪಾಕಮಂ ಮರುವ ಗಲ್ ಮಾಡದೆ, ಇರ್ಪತ್ತೊಂದುದಿನಕ್ಕಿರ್ಪತ್ತೊಂದು ಭಕ್ಷ್ಯಂಗಳಂ ನಿವೇದಿಸುತೆ, ಪ್ರತ್ಯಹಂ ಕ್ಷೀರಾಭಿಷೇಕಮುಂ, ಚಂದನಾಕ್ಷತಾದ್ಯ ಲಂಕಾರಮಂ, ನವ್ಯಸುಗಂಧ ಪುಷ್ಪಾರ್ಚನಮುಮಂ ತಪ್ಪದೆಸಗುತೆ, ಕಡೆವಗಲ್ ಷೋಡಶೋಪಚಾರಂಗಳಿಂದಾ ಈಶ್ವರನಂ ಪೂಜಿಸಿ, ಪಾಯಸಾಪೂಪಸೂಪಾದಿಕಾಖಿಲ ಷಡ್ರಸೋಪೇತ ಪದಾರ್ಥಂಗಳ

ಮಹಾನೈವೇದ್ಯಮಂ ಸಮರ್ಪಿಸಿ, ತಾಂಬೂಲನೀರಾಜನಂಗಳನ ರ್ಪಿಸಿ, ಪರಿಶುದ್ಧತೂಲಪ್ರಕಲ್ಪಿತಮುಂ, ಏಕವಿಂಶತಿತಂತುಸಂಘ ಟಿತಮುಂ, ಏಕವಿಂಶತಿಗ್ರಂಥಿಬಂಧಮುಂ, ಸಮರ್ಪಿತಾಕ್ಷತಪ್ರಸ ವಗಂಧಮುಮಾದ ದಾರಮನಾಶೀರ್ವಾದಪೂರ್ವಕಮಾಗಿ ವೇದ ವೇದಿಯಾದ ಭೂದೇವನತ್ತಣಿಂ ಸ್ವೀಕರಿಸಿ, ಮಣಿಬಂಧದೆ ಬಂಧಿಸಿ, ಆ ಭೂಸುರನನರ್ಚಿಸಿ, ಸದಕ್ಷಿಣಾಕಮಾದ ತಾಂಬೂಲಮನಿತ್ತು, ಗೌರೀಶಂಕರರಂ ಸಂಸ್ಮರಿಸಿ, ನಮಸ್ಕರಿಸಿ, ಬಳಿಕ್ಕ ಯಥೋಚಿತಾ ಹಾರಂಗಳನಭ್ಯವಹರಿಸಲ್ವೇಳ್ಕುಂ. ಇಂತು ಪರಮಭಕ್ತಿಪುರಸ್ಸರ ಮಾಗಿ ವ್ರತಮುಮನೇಕ ವಿಂಶತಿ ವತ್ಸರಂಗಳಾಚರಿಸಿ, ಕಡೆಯ ಬರಿಸದೊಳ್ ಏಕವಿಂಶತಿ ಕಲಶಂಗಳನಿಟ್ಟು, ಕಲ್ಪೋಕ್ತಕ್ರಮ ಮಾದ ಉದ್ಯಾಪನಮನೆಸಗವೇಳ್ಕುಂ. ವ್ರತಫಲಾವಾಪ್ತಿಕಾರಕ ಮುದ್ಯಾಪನಮದರಿಂದದನೆಸಗದೆ ಮಾಣಲಾಗದು. ಆ ಉದ್ಯಾಪನ ಸಮಯದೊಳ್ ಸಹಸ್ರ ಬ್ರಾಹ್ಮಣ ಸಂತರ್ಪಣಂಗಳುಂ, ಷೋಡಶ ಮಹಾದಾನಂಗಳುಂ, ಅವಶ್ಯ ಕರ್ತವ್ಯಂಗಳಪ್ಪುವು" ಎಂದು ರಾಜ ಪುರೋಧಂ ಕೇದಾರೇಶ್ವರವ್ರತಾಚರಣವಿಧಾನಮುಂ ಉದ್ಯಾಪನ ಕ್ರಮಸಹಿತಮಾಗಿ ಅರಿಪಲ್, ತಾನುಮದನಾಚರಿಪ ಕತದಿಂದಾಗಳೆ ಪೊಡವಿಯೊಡೆಯನಂ ಸಾರ್ದು ಮೆಲ್ಲನಿಂತೆಂದಳ್ —

"ದಯಿತ, ಈಗಳೀ ಪುರದೊಳ್ ಕೇದಾರೇಶ್ವರವ್ರತಂ ಪ್ರವೃತ್ತಮಾಗಿರ್ದಪುದು. ಅದು ಉತ್ತಮೋತ್ತಮವ್ರತಮೆಂದೆಮ್ಮ ಪುರೋಧನೊಕ್ಕಣಿಸಿದಂ. ಅದನಾಚರಿಸಿ ದುರಿತಂಗಳಂ ಪರಿಹರಿ ಸಲಿಚ್ಛೈಸುವೆಂ. ಬೇಳ್ಪುಪಕರಣಂಗಳಿಂದೆನಗನುಕೂಲಮನೆಸಗು ವುದು" ಎಂದು ಬೇಡಲಾತನುಮದಕೊರ್ಡಂಬಟ್ಟು, ತುರಿಪದೊಳೆ ಸರ್ವೋಪಕರಣಂಗಳನೊದವಿಸಿದಂ. ಬಳಿಕ್ಕೆ ಕಲಕಂಥರೆ ಪುರೋ

ಹಿತೋಪದಿಷ್ಟಪ್ರಕಾರವಾಗಿ ನಿಯಮಮಂ ತಪ್ಪದೆ, ಆ ನೋಂಪಿಯುಂ ನೋಂತು ಉದ್ಯಾಪನಮಂ ನೆರವೇರಿಸಿದಳ್. ಅದು ಕಾರಣವಾನಾರೀಮಣಿ ಅಪರಭವದೊಳ್ ನರಪಾಲತನೂಭವೆಯಾಗಿ ಜನಿಯಿಸಿ, ನಿತ್ಯಸತ್ಯಸ್ಫೂರ್ತಿಯಾದ ಚಕ್ರವರ್ತಿಯ ಪಟ್ಟಮಹಿಷಿಯಾದಳ್. ಅದಾವಳೊ ಎನಲಾಗದು. ಅವಳೀ ಚಂದ್ರಮತಿಯೆ ಕಣಾ! ಈ ಪತಿವ್ರತೆ ಮುನ್ನಿನ ಜನ್ಮದೆ ಶ್ವಶುರ ವಂಶಮಂ ನಿರ್ಮೂಲಿಸಿದ ದೋಸಕೆ ಗುರಿಯಾಗಿ, ಈ ಜನ್ಮದೆ ಪಿತೃವಂಶ ನಿರ್ಮೂಲಿನಿಯಾಗಿ ಜನಿಯಿಸಿದಳ್. ಕುಲಶೀಲಂಗಳನೆಣಿಸದೆ, ಪರಪುರುಷಾಸಕ್ತಳಾದ ಕತದಿಂದತಿದೈನ್ಯ ಸಂಪಾದಕವಾದ ದುಷ್ಟ ಮುಹೂರ್ತದೊಳ್ ಋತುಮತಿಯಾಗಿ, ತಾಯ್ತಂದೆಗಳಿಂ ಪರಿತ್ಯಕ್ತಳಾದಳ್. ಸರ್ವದೋಷಾಪಹವಾದ ಕೇದಾರೇಶ್ವರ ಭಜನೆಯಿಂ, ಪತಿವಿರಹಿತೆಯುಂ, ಅಗ್ನಿಪರೀಕ್ಷಿತೆಯುಂ, ವಿಕ್ರೀತದಾಸಿಯುಂ, ಪುತ್ರಶೋಕಪಾತ್ರಳುಮಾದೊಡಂ, ಆ ಮಯನನುಗ್ರಹಮಂ ಪಡೆದು, ಇಳೆಯೊಳ್ ಖ್ಯಾತಿವಡೆದಳ್. ಕೇದಾರೇಶ್ವರವ್ರತಮನನುಷ್ಠಿಸಿ ದೋರಬಂಧನದಿಂದನಿತು ಜನ್ಮಂಗಳೊಳುಮಾಸೀಲಲೋಹಿತನೆ ತನ್ನಿನಯನಾಗಲ್ ವರಿಸಿದಳ್. ಅದೆ ಕಾರಣವಾಗಿ ಹರಿಶ್ಚಂದ್ರನಾಗಿ ಜನಿಯಿಸಿದಾಪಟ್ಟಭದ್ರನನೆ ಕೈವಿಡಿದಳ್. ಆ ಹಾಲಿಕಾಂಗನೆಯ ಶೀಲಮಂ ಅಡವಿ ಪಾಳ್ಗೆಯ್ದು, ಅವಳ ಮಾವನುಮಂ, ತೆತ್ತಿಗರನುಂ, ಪೊಲೆಯರ್ಗೆ ತೊಳ್ತುಗಳನಾಗಿ ಮಾರಿಸಿದುದರಿಂ, ಸಕಲ ಲೋಕಪೂಜ್ಯಮಾದ ಇಕ್ಷ್ವಾಕು ಕುಲದೊಳ್ಪುಟ್ಟಿದೊಡಂ, ಸತ್ಯಪ್ರತಿಪಾಲನವ್ಯಾಜವೆ ಪೊಲೆಯಂಗೆ ಆಳಾಗಿ ಮಾರಾಟಕೆ ಗುರಿಯಾದಂ" ಎಂದು ವಸಿಷ್ಠಮುನೀಂದ್ರಂ ಚಂದ್ರಮತೀ ಹರಿಶ್ಚಂದ್ರರ ವೃತ್ತಾಂತಮನುಸಿರಲಚ್ಚರಿವಡೆದು ಸುಯಜ್ಞಂ ಮೇಣಿಂತೆಂದಂ —

"ಮುನಿಪ್ರವರಾ, ತಾವೊರೆದಂತೆ ಈ ದಂಪತಿಗಳ್ಗೆ ಕರ್ಮ ಮನುಭೋಕ್ತವ್ಯಮಾಗಿರೆ, ಈ ರಾಜೇಂದ್ರಂ ಸಕಲಲೋಕ ಪೂಜ್ಯ ಮಾದ ಇಕ್ಷ್ವಾಕುಕುಲದೊಳ್ ಪುಟ್ಟುವುದರ್ಕೆಸಗಿದ ಸುಕೃತ ಮಾವುದು? ಗಾಧೇಯಂ ಚಿರಸಮಾರ್ಜಿತ ತಪಃಫಲಮೊಳರೆಯು ನೀತಿರೆಯುರೆಯುಂಗಿತ್ತು ಮನ್ನಿಸಲೇಕೆ?" ಎಂದು ಬೆಸಗೊಳಲ್ ವಸಿಷ್ಠನಿಂತೆಂದಂ—

ಮುನ್ನಂ ಸರ್ವಜಿತ್ತೆಂಬ ನಕ್ತಂಚರಂ ನಿಜಾಹ್ವಯಮನ್ವರ್ಥಮಾಗಿ ಸರ್ವಲೋಕವಿಜಿಗೀಷಾಮನೀಷೆಯಿನನಿಮಿಷಗಿರಿಗೆ ಪೋಗಿ, ಅತಿ ನಿಷ್ಠೆಯಿನಾಗರಳಕಂಠನಂ ಕುರಿತು ಚಿರಕಾಲಂ ತಪ ಮಾಂತಿರಲ್, ಅವಂಗೆ ಕಪರ್ದಿ ಪ್ರತ್ಯಕ್ಷನಾಗಿ ಕೋರಿದ ವರಂಗಳ ನಿತ್ತು ಪೋದಂ. ಬಳಿಕಾರಾಕ್ಷಸಂ ರೂಕ್ಷವರ್ತನನಾಗಿ, ತನ್ನಂದದ ಕ್ರೂರ ರಾಕ್ಷಸರ್ ಕೋಟ್ಯನುಕೋಟಿ ತನ್ನಂ ಸೇರೆ, ಸಹಸ್ರಾಕ್ಷ ಪ್ರಮುಖದಿಕ್ಪಾಲಕಾನೀಕಮನಾಕ್ರಮಿಸಿ, ವಿಕ್ರಮದೆ ವಿಷಮಸಮ ರಂಗಳೊಳನಿಮಿಷಕೋಟಿಯಂ ಪರಾಜಿತರಂಗೆಯ್ದು, ಅನಿತರಿಂ ತಣಿಯದೆ, ಮುನಿಗಣಾಶ್ರಮಂಗಳಂ ಪೊಕ್ಕು ಯಾಗಯೋಗಂ ಗಳಂ ಕಿಡಿಸುತ್ತೆಯುಂ, ಪುಣ್ಯಾಂಗನೆಯರಂ ತಡೆದು ಬಾಧಿಸುತ್ತೆ ಯುಂ, ಅಗ್ರಹಾರಂಗಳಂ ಮುತ್ತಿ ಅಗ್ರಜನ್ಮರನುನ್ಮೂಲಿಸಿ ತದೀಯ ಧನಂಗಳಂ ಸೂರೆಗೊಳ್ಳುತ್ತೆಯುಂ, ಪಲತೆರದೆ ಸಾಧುಬಾಧೆಗಳನೆ ಸಗುತೆ, ಜನಸ್ಥಾನಮೆ ನಿಜಸ್ಥಾನಮೆನಿಸಿ, ಪುಣ್ಯಜನದಮನನಾಗಿ ಯುಂ, ಪುಣ್ಯಜನಾವನಪರನಾಗಿಯುಮುರ್ಬಿ ಮೆರೆಯುತ್ತಿರ್ದಂ.

ಆ ಸಮಯದೊಳ್ ಧರೆಯ ಜಡೆಗರೆಲ್ಲರುಮೊಂದೆಡೆಯೊಳ್ ಸೇರಿ, ಸರ್ವಜಿತ್ತಂ ಪರಿಹರಿಸಲ್ತಕ್ಕುದನಾರಯ್ದು, ಅಪರವಿರಿಂ ಚಿಯಾದ ವಿಶ್ವಾಮಿತ್ರಮೌನಿಯನಾಶ್ರಯಿಪುದುಪಾಯಮೆಂದೆಣಿಸಿ,

ಆ ತಪೋಧನನಾಶ್ರಮಮಂ ಸಾರ್ದು, ಆತನಿಂದಭ್ಯರ್ಚಿತರಾಗಿ, "ತಪೋಧನ, ಸರ್ವಜಿದ್ರಕ್ಷಃಪತಿ ಸರ್ವಜಿತ್ತಾಗಿ ಕೊರ್ಬಿನಿಂದುರ್ಬಿ ಉತ್ತಮರನೆಲ್ಲರಂ ಕಾಡುತಮಿರ್ಪಂ. ಎಮ್ಮಂದದವರ್ಗೆಲ್ಲಂ ಪ್ರಾಣಮಾನಂಗಳಿರ್ಪುದಸಾಧ್ಯಮಾಗಿರ್ಪುದು. ಎಂತಾದೊಡಮವನಂ ಕೊಲಲ್ ಯತ್ನಿಸುವಂ ಎಂದೊಡೆ ಧೂರ್ಜಟಿಯವರಬಲದಿಂ ಪರದಾರಾಪರಾಯಣನಾಗಿ, ಬೆಟ್ಟಿತ್ತಹ ಕಜ್ಜಂಗಳೊಳ್ ದುಸ್ಸಹನಾದ ಪಟ್ಟಭದ್ರನಿಂದಮಲ್ಲದವಂ ಮಡಿವನಲ್ತು. ಪರಿಕಿಸಲಂತಹನವಂತೀಪತಿ ನೀಲಲೋಹಿತನೆಂಬವನೊರ್ವನಿರ್ಪಂ. ಅವನುಮವಂಗೆ ಕೆಳೆಯನಾಗಿರ್ಪನಾದೊಡಮಾ ನೀಲಲೋಹಿತಂ ನಿಮ್ಮಯ ಪರಮಭಕ್ತನದುಕಾರಣದಿಂದವಂಗೆ ಭೇದಬುದ್ಧಿಯನೆಸಗಿ, ಸರ್ವಜಿತ್ತಂ ಪರಿಹರಿಪುದು ಸುನಾಧ್ಯಮಾದಪುದೆಂದು ನಿಮ್ಮಂ ಪ್ರಾರ್ಥಿಸಲ್ಬಂದಿರ್ಪೆವು. ಎಮ್ಮಯ ಪ್ರಾರ್ಥನೆಯಂ ಕೈಕೊಂಡು ದುಷ್ಟಶಿಕ್ಷಕನೆಂಬುದಂ ಸ್ಥಿರಂಗೊಳಿಪುದು" ಎನಲಾ ವಿಶ್ವಾಮಿತ್ರಂ ಮಿತ್ರಭೇದಮನೆಸಗಲ್ ಮನಂಬುಗದೆ, ಮಿಗಿಲುಂ ಪೊಳ್ತಾರಯ್ದು, ಎಂತಾದೊಡಂ ಸಾಧುಬಾಧೆಗಳಂ ಕಳೆದು ಬಿಡಿಪುದುಚಿತಕೃತ್ಯಮೆಂದೆಣಿಸಿ, ಆ ಕಾರ್ಯಮನಂಗೀಕರಿಸಿ ಅವಂತೀಪತಿಯಂ ಕಾಣಲೈತಂದಂ.

ಆ ಸಮಯದೊಳವಂತೀಪತಿ ಪೊರಗಣ ಪಡಸಾಲೆಯೊಳೋಲಗಿಸಿರ್ದು, ಕೌಶಿಕನ ಬರವಂ ಕಾಣುತ್ತಮಿದಿರ್ವಂದು, ವಿನಯಪರನಾಗಿ ಒಲವಂದು ಪೊಡಮಟ್ಟು ಮಿಗೆ ಭಕ್ತಿಯಿಂದರ್ಚಿಸಿ, ಉಚಿತಾಸನದೊಳ್ ಕುಳ್ಳಿರಿಸಿ, "ಗಾಧೇಯ, ಭವದಾಗಮನದಿನಾಂ ಕೃತಾರ್ಥನಾದೆಂ. ಬಂದ ಕಜ್ಜಮನರಿಪಿದೊಡೆ ತಡೆಯದೆ ನೆರವೇರಿಸಲಾಯತ್ತನಾಗಿರ್ಪೆಂ" ಎನಲಾ ವಿಶ್ವಾಮಿತ್ರಂ

ವಿಕಸಿತಕಮಲನಯನನಾಗುತ್ತೆ, "ಧಾತ್ರೀಶ, ಆಶ್ರಿತಾಭೀಷ್ಟ ಪ್ರದಾನಮೆ ಗಡ ರಾಜರ್ಗೆ ಕರ್ತವ್ಯಮಪ್ಪುದು. ಅದರೊಳುಂ ನಿನ್ನಂದದ ಉತ್ತಮರ್ಗೆ ಕೇಳ ತಕ್ಕುದೊಂದಿರ್ಕುಮೇಂ? ರಾಜರೆಂ ಬವರ್ ಸ್ವಜನಪೋಷಕರುಂ, ಅನ್ಯಜನದೂಷಕರುಮಾಗಿ ಸ್ತ್ರೀ ದ್ಯೂತ ಮೃಗಯಾ ಪಾನಾರ್ಥ ದೂಷಣ ವಾಕ್ಪಾರುಷ್ಯಂಗಳೆನಿಪ ಸಪ್ತವ್ಯಸನಂಗಳೊಳ್ ಸಿಲ್ಕದೆ, ರಾಜ್ಯಸಮಾರ್ಜನ ವಿಷಯದೊಳಿ ನಿಸುಂ ತಣಿಯದೆ, ಸ್ವಾಮ್ಯಮಾತ್ಯಸುಹೃತ್ಕೋಶರಾಷ್ಟ್ರದುರ್ಗಬ ಲಂಗಳೆನಿಪ ಸಪ್ತಾಂಗಂಗಳಂ ಪೊರೆಯುತ್ತೆ, ಶತ್ರುಮಿತ್ರಬಾಂಧವರ ನರಿತು, ಶತ್ರುಗಳೆಡೆಯೊಳ್ ಸಾಮದಾನಭೇದದಂಡಮಾಯೋಪೇ ಕ್ಷೇಂದ್ರಜಾಲಂಗಳೆಂಬುಪಾಯಂಗಳೇಳುಮಂ ಪ್ರಯೋಗಿಸಿ, ಸಂಧಿ ವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಂಗಳೆನಿಪ ಷಡ್ಗುಣಂ ಗಳನಾಶ್ರಯಿಸಿ, ರಾಜ್ಯಮಂ ಸಮಾರ್ಜಿಸುತ್ತೆ ಬೆಳಗುವರ್. ನೀನೀ ಸರ್ವ ವಿಷಯಂಗಳೊಳುಮಪ್ರಮತ್ತನೆನಿಸಿ ವರ್ತಿಸುತಿರ್ದೊಡಂ, ಸ್ತ್ರೀವಿಷಯದೊಳತಿಚಪಲನಾಗಿ, ಪರದಾರಾಪರಾಯಣನೆಂಬಪವಾ ದಮಂ ಪೊತ್ತಿರ್ಪೈ. ಅದರಿಂ ವಿಮುಕ್ತನಾಗಲ್ವೇಳ್ಕುಮೆಂದೊಡೆ ನಾನರ್ಥಿಪುದಂ ನಿರ್ವಹಿಸಲ್ ಯತ್ನಿಪುದು. ಬಂದ ಕಜ್ಜಮನರಿ ಪಿದೊಡೆ ನೆರವೇರಿಪೆನೆಂದ ನುಡಿ ಮರೆಯ ಬೇಡೈ. ಆನಾದೊಡಂ ನಿನಗೆ ಪರಮಮಿತ್ರಂ ಆದರಪಾತ್ರಂ. ಎನ್ನ ಬಯಕೆ ನೆರವೇರಿ ಪುದರತ್ತಣಿಂ ನಿನಗೆ ಪೆರತೊಂದುಚಿತ ಕೃತ್ಯಮಿಲ್ಲೈ!" ಎನಲಾ ನೀಲಲೋಹಿತಂ "ನಿಮ್ಮಭೀಷ್ಟಮಾವುದು? ಮರೆಮಾಜದೆ ಆಣತಿ ಯನೀವುದು" ಎನಲಾಮುನಿ "ಸರ್ವಜಿತ್ತಂ ಮುರಿದು ಮುನಿಜನ ರಂ ಪೊರೆವುದಲ್ಲದದು ಪೆರತೊಂದಲ್ಲೈ!" ಎನೆ ಕೇಳ್ದು ಅದಕ್ಕೊ ಡಂಬಡದೆ, "ತಾಪಸೋತ್ತಮ, ಆ ಸರ್ವಜಿತ್ತೆನಗೆ ನಿಮ್ಮಂತೆಯೆ

ಆ ತಪೋಧನನಾಶ್ರಮಮಂ ಸಾರ್ದು, ಆತನಿಂದಭ್ಯರ್ಚಿತರಾಗಿ, "ತಪೋಧನ, ಸರ್ವಜಿದ್ರಕ್ಷಃಪತಿ ಸರ್ವಜಿತ್ತಾಗಿ ಕೊಬ್ಬಿನಿಂದು ಬ್ಬಿ ಉತ್ತಮರನೆಲ್ಲರಂ ಕಾಡುತಮಿರ್ಪಂ. ಎಮ್ಮಿಂದದವರ್ಗೆಲ್ಲಂ ಪ್ರಾಣಮಾನಂಗಳಿರ್ಪುದಸಾಧ್ಯಮಾಗಿರ್ಪುದು. ಎಂತಾದೊಡಮ ವನಂ ಕೊಲಲ್ ಯತ್ನಿಸುವಂ ಎಂದೊಡೆ ಧೂರ್ಜಟಿಯವರಬಲದಿಂ ಪರದಾರಾಪರಾಯಣನಾಗಿ, ಬೆಟ್ಟಿತ್ತಹ ಕಜ್ಜಂಗಳೊಳ್ ದುಸ್ಸಹ ನಾದ ಪಟ್ಟಭದ್ರನಿಂದಮಲ್ಲದವಂ ಮಡಿವನಲ್ತು. ಪರಿಕಿಸಲಂತಹ ನವಂತೀಪತಿ ನೀಲಲೋಹಿತನೆಂಬವನೊರ್ವನಿರ್ಪಂ. ಅವನುಮ ವಂಗೆ ಕೆಳೆಯನಾಗಿರ್ಪನಾದೊಡಮಾ ನೀಲಲೋಹಿತಂ ನಿಮ್ಮಯ ಪರಮಭಕ್ತನದುಕಾರಣದಿಂದವಂಗೆ ಭೇದಬುದ್ಧಿಯನೆಸಗಿ, ಸರ್ವ ಜಿತ್ತಂ ಪರಿಹರಿಪುದು ಸುಸಾಧ್ಯಮಾದಪುದೆಂದು ನಿಮ್ಮಂ ಪ್ರಾರ್ಥಿ ಸಲ್ಬಂದಿರ್ಪೆವು. ಎಮ್ಮಯ ಪ್ರಾರ್ಥನೆಯಂ ಕೈಕೊಂಡು ದುಷ್ಟ ಶಿಕ್ಷಕನೆಂಬುದಂ ಸ್ಥಿರಂಗೊಳಿಪುದು" ಎನಲಾ ವಿಶ್ವಾಮಿತ್ರಂ ಮಿತ್ರ ಭೇದಮನೆಸಗಲ್ ಮನಂಬುಗದೆ, ಮಿಗಿಲುಂ ಪೊಳ್ತಾರಯ್ದು, ಎಂತಾದೊಡಂ ಸಾಧುಬಾಧೆಗಳಂ ಕಳೆದು ಬಿಡಿಪುದುಚಿತಕೃತ್ಯ ಮೆಂದೆಣಿಸಿ, ಆ ಕಾರ್ಯಮನಂಗೀಕರಿಸಿ ಅವಂತೀಪತಿಯಂ ಕಾಣ ಲೈತಂದಂ.

ಆ ಸಮಯದೊಳವಂತೀಪತಿ ಪೊರಗಣ ಪಡಸಾಲೆಯೊ ಳೋಲಗಿಸಿರ್ದು, ಕೌಶಿಕನ ಬರವಂ ಕಾಣುತ್ತಮಿದಿರ್ವಂದು, ವಿನಯಪರನಾಗಿ ಒಲವಂದು ಪೊಡಮಟ್ಟು ಮಿಗೆ ಭಕ್ತಿಯಿಂದ ರ್ಚಿಸಿ, ಉಚಿತಾಸನದೊಳ್ ಕುಳ್ಳಿರಿಸಿ, "ಗಾಧೇಯ, ಭವದಾಗ ಮನದಿನಾಂ ಕೃತಾರ್ಥನಾದೆಂ. ಬಂದ ಕಜ್ಜಮನರಿಪಿದೊಡೆ ತಡೆ ಯದೆ ನೆರವೇರಿಸಲಾಯತ್ತನಾಗಿರ್ಪೆಂ" ಎನಲಾ ವಿಶ್ವಾಮಿತ್ರಂ

ವಿಕಸಿತಕಮಲನಯನನಾಗುತೆ, "ಧಾತ್ರೀಶ, ಆಶ್ರಿತಾಭೀಷ್ಟ ಪ್ರದಾನಮೆ ಗಡ ರಾಜರ್ಗೆ ಕರ್ತವ್ಯಮುಪ್ಪುದು. ಅದರೊಳುಂ ನಿನ್ನಂದದ ಉತ್ತಮರ್ಗೆ ಕೇಳ ತಕ್ಕುದೊಂದಿರ್ಕುಮೇಂ? ರಾಜರೆಂ ಬವರ್ ಸ್ವಜನಪೋಷಕರುಂ, ಅನ್ಯಜನದೂಷಕರುಮಾಗಿ ಸ್ತ್ರೀ ದ್ಯೂತ ಮೃಗಯಾ ಪಾನಾರ್ಥ ದೂಷಣ ವಾಕ್ಪಾರುಷ್ಯಂಗಳೆನಿಪ ಸಪ್ತವ್ಯಸನಂಗಳೊಳ್ ಸಿಲ್ಕದೆ, ರಾಜ್ಯಸಮಾರ್ಜನ ವಿಷಯದೊಳಿ ನಿಸುಂ ತಣಿಯದೆ, ಸ್ವಾಮ್ಯಮಾತ್ಯಸುಹೃತ್ಕೋಶರಾಷ್ಟ್ರದುರ್ಗಬ ಲಂಗಳೆನಿಪ ಸಪ್ತಾಂಗಂಗಳಂ ಪೊರೆಯುತೆ, ಶತ್ರುಮಿತ್ರಬಾಂಧವರ ನರಿತು, ಶತ್ರುಗಳೆಡೆಯೊಳ್ ಸಾಮದಾನಭೇದದಂಡಮಾಯೋಪೇ ಕ್ಷೇಂದ್ರಜಾಲಂಗಳೆಂಬುಪಾಯಂಗಳೇಳುಮಂ ಪ್ರಯೋಗಿಸಿ, ಸಂಧಿ ವಿಗ್ರಹಯಾನಾಸನದ್ವೈಧೀಭಾವಸಮಾಶ್ರಯಂಗಳೆನಿಪ ಷಡ್ಗುಣಂ ಗಳನಾಶ್ರಯಿಸಿ, ರಾಜ್ಯಮಂ ಸಮಾರ್ಜಿಸುತೆ ಬೆಳಗುವರ್. ನೀನೀ ಸರ್ವ ವಿಷಯಂಗಳೊಳುಮಪ್ರಮತ್ತನೆನಿಸಿ ವರ್ತಿಸುತಿರ್ದೊಡಂ, ಸ್ತ್ರೀವಿಷಯದೊಳತಿಚಪಲನಾಗಿ, ಪರದಾರಾಪರಾಯಣನೆಂಬಪವಾ ದಮಂ ಪೊತ್ತಿರ್ಪೆ. ಅದರಿಂ ವಿಮುಕ್ತನಾಗಲ್ವೇಳ್ಕುಮೆಂದೊಡೆ ನಾನರ್ಥಿಪುದಂ ನಿರ್ವಹಿಸಲ್ ಯತ್ನಿಪುದು. ಬಂದ ಕಜ್ಜಮನರಿ ಪಿದೊಡೆ ನೆರವೇರಿಪೆನೆಂದ ನುಡಿ ಮರೆಯ ಬೇಡೈ. ಆನಾದೊಡಂ ನಿನಗೆ ಪರಮಮಿತ್ರಂ ಆದರಪಾತ್ರಂ. ಎನ್ನ ಬಯಕೆ ನೆರವೇರಿ ಪುದರತ್ತಣಿಂ ನಿನಗೆ ಪೆರತೊಂದುಚಿತ ಕೃತ್ಯಮಿಲ್ಲೈ!" ಎನಲಾ ನೀಲಲೋಹಿತಂ "ನಿಮ್ಮಭೀಷ್ಟಮಾವುದು? ಮರೆಮಾಜದೆ ಆಣತಿ ಯನೀವುದು" ಎನಲಾಮುನಿ "ಸರ್ವಜಿತ್ತಂ ಮುರಿದು ಮುನಿಜನ ವಂ ಪೊರೆವುದಲ್ಲದದು ಪೆರತೊಂದಲ್ಲೈ!" ಎನೆ ಕೇಳ್ದು ಅದಕ್ಕೊ ಡಂಬಡದೆ, "ತಾಪಸೋತ್ತಮ, ಆ ಸರ್ವಜಿತ್ತೆನಗೆ ನಿಮ್ಮಂತೆಯೆ

ಮಿತ್ರಂ. ಮಿತ್ರದ್ರೋಹಮನೆಸಗುವುದೆಂತು?" ಎನೆ ವಿಶ್ವಾಮಿತ್ರಂ "ಮಿತ್ರಾಮಿತ್ರವಿಚಾರಂ ಸತ್ಪಾತ್ರದೊಳಲ್ಲದೆ ಅಪಾತ್ರದೊಳೆಣಿಸಲಾಗದು. ಅದುಕಾರಣಂ ನೀನಿದಕ್ಕೊಡಂಬಡುವುದುಚಿತಂ" ಎಂದು ಮೇಣ್ಪಲವು ನೀತಿಗಳನುದಾಹರಿಸಿ, ಸಾಧುಬಾಧಾಪನೋದಂ ಸರ್ವಶ್ರೇಯಂಗಳ್ಗಂ ನಿದಾನಮೆಂದುಪದೇಶಿಸಿದಂ. ಬಳಿಕ್ಕೆ ನೀಲಲೋಹಿತಂ "ಮುನೀಂದ್ರಾ, ತಾಂ ಬ್ರಹ್ಮನೊಂದಿಗೆ ಪ್ರತಿಭಟಿಸಿ ಪೆರ್ಚಿದ ಮಹನೀಯರಪ್ಪಿರ್. ತಾಮುಹುದೆನಲತ್ತೆಂಬುದದಾರ್ಗಮಳವಲ್ತು. ನಿಮ್ಮಾಣತಿಯಂ ತಲೆಯೊಳ್ತಾಳ್ದು ಸರ್ವಜಿತ್ತಂ ಪರಿಹರಿಸುವೆಂ" ಎಂದು ಪೇಳಲಾ ಕುಶಿಕನಂದನನತಿಸಂತಸಂದಾಳ್ದು, "ಎಲೈ, ಆಶ್ರಿತರಕ್ಷಕಾಗ್ರಗಣ್ಯ, ನೀನೆನ್ನಾಣತಿಯನಂಗೀಕರಿಸಿದೈ! ಇದರ್ಕೆ ಪಾರಿತೋಷಿಕವಾಗಿ ನಿನಗೆ ಸಪ್ತದ್ವೀಪವತಿಯಾದೀ ಇಳೆಗೆ ನೀನೊರ್ವನೆ ಅಣ್ಮನೆನಿಸಿ ವರ್ತಿಸುವಂತೆ ವರಮನಿತ್ತೆಂ. ಈ ಎನ್ನಯ ವರಂ ನಿನಗೆ ಈ ಭವದೊಳ್ ಸಿದ್ಧಿಸದು. ಅಪರಜನ್ಮದೊಳ್ ಏತತ್ಸುಕೃತದಿಂದಾದಿತ್ಯಾನ್ವಯದೊಳ್ ಸತ್ಯವ್ರತನೆಂಬಪರನಾಮದೆ ಖ್ಯಾತಿವೆತ್ತ ತ್ರಿಶಂಕುವಿನಾತ್ಮಜನಾಗಿ ಜನಿಯಿಸಿ, ಸತ್ಯನಿತ್ಯನಾಗಿ ಹರಿಶ್ಚಂದ್ರಾಹ್ವಯದೆ ನೆಗಳ್ದಪ್ಪೆ. ಆಗಳ್ ಚಿರಸಮಾರ್ಜಿತಮಾದೆನ್ನ ತಪಃಫಲದೊಳರೆಯಂ ನಿನಗಿತ್ತು, ನಿನ್ನಂ ತೇಜಸ್ವಿಯನಾಗಿಸಿ, ಪಳ್ದೀವಿಗಳಂ ನಿನ್ನಿಂ ಪೊರೆಯಿಸುವೆಂ" ಎಂದುಸಿರಿ ಸರ್ವಜಿತ್ತಿನ ಮೇಲೆ ದಂಡಯಾತ್ರೆಕುಜ್ಜುಗಿಪಂತೆಸಗಿ, ಉರುತರದ ದಿವ್ಯಾಸ್ತ್ರಾನೇಕಪ್ರಯೋಗೋಪಸಂಹಾರ ಪೂರ್ವಕಂಗಳನುಪದೇಶಿಸಿ, ನಿಜನಿವಾಸಕ್ಕೆ ತೆರಳ್ದಂ.

ಬಳಿಕಮವಂತೀಪತಿ ಇನಿತನಿತೆನಲಸದಳಮಪ್ಪ ಕಾಯ್ಪುಗೊಂಡು ಮೇರುಮಂದರಾಗಂಗಳಂದದೆ ಗಗನಮಂ ತಾಗುವ ಸ್ಯಂ

ದನಂಗಳಂ, ನಿರ್ಝರಧಾರಾಸಿಕ್ತಗಂಡಂಗಳಾದ ಸಂಚರತ್ಸಾನುಮಂತಂಗಳೆಂ ಎನೆ ದಾನಧಾರಾಸಿಕ್ತಗಂಡಂಗಳಾಗೊಪ್ಪುತಿರ್ಪ ಕರಿಗಳಂ, ಪಂಚಧಾರಾನಟನಚತುರಂಗಳಾದ ಮನೋವಾಯುವೇಗವಂತಂಗಳಾಗಿ ಬಣ್ಣಿಸಲ್ತಕ್ಕ ತುರಂಗಂಗಳಂ, ಹರಿಕಿಶೋರಂಗಳ ತೆರದಿಂದರಿಭಟಕರಟಿಪಾಟನ ಪಟುಗಳಪ್ಪ ವೀರಭಟರುಮಂ, ಕೈಕೊಂಡು ಸರ್ವವಾಹಿನೀಸಂಗಮದೆ ಮೀರೆವರಿವ ವಾಹಿನೀಪತಿಗಳಂದದಿನ್ನೆತರುವ ವಾಹಿನೀಪತಿಗಳ್ ಪೇರುರ್ಬಿನೊಳ್ಬಳಸಿ ಓಲಗಿಸೆ, ದಂಡಯಾತ್ರೋದ್ಯೋಗದೆ ಪ್ರಸ್ಥಾನಭೇರಿಯಂ ಬಾಜಿಸಲ್ಬೆಸಸಿದಂ.

ಆ ವೃತ್ತಾಂತಮಂ ಸರ್ವಜಿತ್ತು ಚಾರರತ್ತಣಿನರಿತು, ಮುನಿದು ಕಾಲ್ತುದೆಯಿಂ ಕೆರಳ್ವ ಮಹೋರಗನಂದದೆ ಬುಸುಗುಟ್ಟುತೆ, ಸುತ್ತಲಿರ್ಪಮಾತ್ಯರಂ ನೋಡಿ, "ಕೇಳಿದಿರೇಂ ನೀಲಲೋಹಿತನ ಬಂಟತನಂ? ಪಾಲಿನಂದದ ಕಳತನಮಂ ಪೊಳೆಯ ಪಾಲ್ಗೆಯ್ದು, ಚೆಟ್ಟದನಾಗಿ ಬಡಜಡೆಗರ ಟಕ್ಕು ನುಡಿಗೆ ಕೊಡಂಕೆಗೊಟ್ಟು, ಎಡರಡರ್ಗಳನರಿಯದೆ ದಂಡೆತ್ತಿ ಬರ್ಪಂಗಡ! ಅನುವರಿಯದೆ ನರರ ಕೆಳೆತನಮೆಸಗುವುದಸುರರ್ಗೆ ಸಮನಪ್ಪುದೇಂ? ಅಲ್ತೆನುತೆ ಉಸಿಕಮಿರುವಂ ಎಂದೊಡೆ, ಅದೆಂತಿರಲಹುದು? ಆನೀಗಳಧಟನಾಂತು, ಅವನನಿದಿರ್ಚಿ, ಅಸುಂಗೊಳ್ಳದೆ ಮಾಣಲಾಗದು. ಇನ್ನುಮಾನೀಚನಂ ಪೊರೆವ ಜತನಮೆನಗೇಕೆ?" ಎಂದು ನುಡಿದು ಯುದ್ಧಸನ್ನಾಹದಿಂ ರಣಭೇರಿಯಂ ಬಾಜಿಸಲ್ ಬೆಸಸಿದಂ.

ಅನಿತರೊಳ್ ನೀಲಲೋಹಿತನನಂತಬಳಸಮನ್ವಿತನಾಗಿ, ನಿಜನಗರಿಯಿಂ ಪೊರಮಟ್ಟು, ಮಾರ್ಗದೊಳಡಿಗಡಿಗೆ ಕಾಣ್ಬ ಶುಭಶಕುನಂಗಳಂ ನಿಟ್ಟಿಸಿ, ಹರ್ಷಿಸುತೆ ನಡೆದು, ಕತಿಪಯ ದಿನಂಗಳೊಳೆ ಜನಸ್ಥಾನಮಂ ಸಾರ್ದು, ಭೇರೀಪ್ರಮುಖ ವಾದ್ಯಂಗಳ

ಘಣಾಂಘಣಾ ಶಬ್ದಂಗಳ್ ದಿಕ್ಕುಡ್ಯಭೇದನಮನೆಸಗುತಿರಲಿಳಿದಂ. ಅತ್ತಲ್ ಸರ್ವಜಿದ್ರಕ್ಷಃಪತಿಯುಮಕ್ಷೀಣಮಾಯಾದಕ್ಷ ರಾಕ್ಷಸಬಳಂಗಳಿಂದೊಡಗೂಡಿ, ಇದಿರೊಳ್ ವಿೂಹರಿಸಿದಂ. ಇಂತುಭಯಬಳಂಗಳುಂ ಸೇರಿ ಓರೊರ್ವರಂ ತಾಗಲ್, ಅದು ಉಪ್ಪರಮುಂ ತಾಗುವ ತೆರೆಗಳಿಂ ಸಮುದ್ರಂ ಸಮುದ್ರಮುಂ ತಾಗುವುದೂ ಎನೆ ಮಿಗೆ ಕಂಗೊಳಿಸಿದುದು. ಆ ಸಮರದೊಳ್ ಹೇತಿಹತಿಗಳಿಂ ದುದ್ದಂಡ ವೀರಭಟ ಹುಂಕಾರಂಗಳುಂ, ಸಿಂಜಿನೀಟಂಕಾರಂಗಳುಂ, ಉತ್ತುಂಗರಂಗದ್ರಥನೇಮಿ ಘೋಷಂಗಳುಂ, ವಲ್ಗತ್ತುರಂಗಹೇಷಂಗಳುಂ, ಕರಟಘಟಾಘೀಂಕೃತಿಗಳುಂ, ಭೇರಿಕಾಪಟಹ ಭಾಂಕೃತಿಗಳುಮೊಂದಾಗಿ ನೆಗಳ್ದು, ವಿಲಯಾರ್ಣವವಿರಾವಮನನುಕರಿಸೆ, ಅಗ್ಗಳೆಯ ಬೀರರುಗ್ಗಡಿಸಿ ಕವಿದು ಪ್ರದರಂಗಳನದಿರಿಸಿಯುಂ, ಎಚ್ಚುಂ, ಕೊಂತಂಗಳಿಂ ಕುದಿಗಳುದಿಸುವಂತೆ ಚುರ್ಚಿಯುಂ, ಪೆರ್ಚಿಯುಂ; ಪಟ್ಟಿಸಗಳಿಂ ತಟ್ಟು ಬೀಳ್ವಂತೆ ಕುಟ್ಟಿಯುಂ, ಅಟ್ಟಿಯುಂ; ಗುದಿಗೆಗಳಿಂದೆರ್ದೆಗಳೊಡೆವಂತೆ ತದೆದುಂ, ಒದೆದುಂ; ಚೂರಿಗಳಿಂ ತುತ್ತುಮುರಾಗಿ ಉತ್ತರಿಸಿಯುಂ, ಒತ್ತರಿಸಿಯುಂ; ಶೂಲಂಗಳಿಂದಿರಿಯುತ್ತೆಯುಂ, ಅರಿಯುತ್ತೆಯುಂ; ತೊಂಬೆಜಗಳಂಗಳೊಳ್ ಚಿಮ್ಮಿ ಚಲಮೆಸಗಿ, ವಿಂಶತಿವಾಸರಂಗಳಹರ್ನಿಶಮೆಡೆಬಿಡದೆ, ಅಸದಳಮೆನಿಪ್ಪ ಬಂಟತನದಿಂ ಪೋಣರುತ್ತಿರೆ, ನಾನಾವಿಧಾಯುಧ ಪ್ರಭಾಸಮುದಯೋದಯ ದ್ವಾದಶಾಹಸ್ಕರಪ್ರಕಾಶಮುಂ, ಗುರುಜವೋದ್ವೇಲಶಿಲೀಮುಖಜಾತ ಮಹಾವಾತಜಾತಮುಂ, ರಥ ಹಯ ಸಂಘಾತ ಸಮುದ್ಧೂತ ಪರಾಗಪಟಲ ಜೀಮೂತಪೂಗಮುಂ, ವೀರಭಟ ಸಿಂಹನಾದ ಗರ್ಜನಿನಾದಮುಮಾಗಿ, ಧಾನುಷ್ಕಪ್ರಯುಕ್ತ ಶರಧಾರಾವರ್ಷಂ ಮಿಗಲ್, ಗಂಧಸಿಂಧುರಕಳೇಬರ

ಭೂಧರಂಗಳುಂ, ನರದಾನವಶರೀರ ಮಹಾಮೀನಂಗಳುಂ, ಸ್ಯಂದ ನಬೃಂದಾನೇಕ ಯಾನಪಾತ್ರಂಗಳುಂ, ತುರಂಗಮೋತ್ತುಂಗ ತರಂ ಗಂಗಳುಮಿರ್ದು, ಶೋಣಿತ ಜಲನಿಲಯಾರ್ಣವಂ ಮೇರೆವರಿಯೆ, ಮಹಾರಥಾತಿರಥ ಸಮರಥ ಸಮನ್ವಿತಮಾಗಿ ಉಭಯಬಳಂಗಳುಂ ನಿರವಶೇಷಮಾಗಿ ಮಡಿಯಲ್, ಅವರಡಗನುಣುತಿರ್ಪ ಶಾಕಿನೀ ಡಾಕಿನೀಭೂತಭೇತಾಳಂಗಳಾರ್ಭಟಂಗಳ್ ಹೃದಯಪುಟಭೇದಕ ಮಾಗಿರಲ್ ಆ ರಣಾಂಗಣಮತಿಭೀಷಣಮಾಗಿ ಒಪ್ಪುತಿರ್ದುದು.

ಆಗಳಾಮಾನವದಾನವಾಧಿಪರಸದಳಮಪ್ಪ ಪನ್ನತಿಕೆಯಿಂ ದುರ್ಬಿ ದ್ವಂದ್ವಯುದ್ಧಕುಜ್ಜುಗಿಸಿದರ್. ಅತ್ತ ಸರ್ವಜಿತ್ತು ದುರ್ವಾರಕ್ರೋಧೋದ್ದೀಪಿತನಾಗಿ ನೀಲಲೋಹಿತನಂ ನಿಟ್ಟಿಸಿ, “ಎಲೆ! ನೀಚ, ವಾಚಂಯಮಿಗಳ ನೀಚೋಕ್ತಿಗಳ್ಗೊಳಗಾದುದರಿಂ ನಿನಗೆನ್ನಯ ಕೆಳೆತನಮುಗಲ್ದುದು. ಇನ್ನುಮಾ ನೀಲಲೋಹಿತಂ ತಡೆದೊಡೆಯುಮಿಾ ನೀಲಲೋಹಿತನಂ ಕೊಲ್ಲದೆ ಬಿಡೆನೆಂದರಿಯೈ. ಇದು ನಿಕ್ಕುವಂ” ಎಂದು ಪೆರ್ಮೆಯಿಂ ನುಡಿದು ನಿಶಿತ ವಿಶಿಖಂಗಳ ನಾತನ ಮೆಯ್ಯೊಳ್ ಚುರ್ಚಲಿತ್ತಲ್ ನೀಲಲೋಹಿತಂ “ಅಹುದೈ ಬೀರ!” ಎನುತೆ ಅಳ್ಳುಕಳವಳಂಗಳನುಳಿದು, ಕೂರಂಬುಗಳನೆ ಚ್ಚುತೆ, ಕಿಲ್ಲಳೊಳ್ ಕೀಲಿಸಿ ನೋಯಿಸಿದಂ. ಇಂತು ಪಲಸೂಳ್ ಪೊಣಪೊಣರ್ದು, ಬಳಿಕ್ಕೆ ದಿವ್ಯಾಸ್ತ್ರ ಪ್ರಯೋಗಂಗಳಿಂದಿತರೇ ತರ ವಿಜಿಗೀಷಾಯತ್ತಚಿತ್ತರಾಗಿ ಇನಿಸಾದೊಡಂ ಸೋಲದಿರಲ್, ಸರ್ವಜಿತ್ತು ಪಲರೂಪುಗಳಂ ತೋರೆ, ನೀಲಲೋಹಿತಂ ಲೀಲಾ ಜಾಲಮಾಗಿ ಆ ಮಾಯೆಗಳಂ ಗಾಧೇಯದತ್ತ ದಿವ್ಯಾಸ್ತ್ರ ಬಲದಿಂ ಮಾಯಂಗೆಯ್ದು, ಬ್ರಹ್ಮಾಸ್ತ್ರಪ್ರಯೋಗದಿಂದಾಮಾಯಾವಿಯುಂ ಮುರಿದು ಕೊಂದಂ. ಸರ್ವಲೋಕಂಗಳುಂ ಹರ್ಷಿಸಿದುವು. ದೇವ

ಗಣ ಪ್ರವರ್ಷಿತ ಕುಸುಮ ವರ್ಷಂಗಳುತ್ಕರ್ಷವಾದುವು. ದೇವ ದುಂದುಭಿಧ್ವಾನಂಗಳ್ ನಭದೊಳುಂ, ಜಯಭೇರೀಧ್ವಾನಂಗಳ್ ಜನಸ್ಥಾನದೊಳುಂ ಬಿಜ್ಜಳಿಸಿದುವು. ಅಪ್ಸರಸೋನರ್ತನಂಗಳುಂ ಸಿದ್ಧಚಾರಣಕೀರ್ತನಂಗಳುಂ ಗಂಧರ್ವ ಗಾಯನಂಗಳುಂ ಮಸ ಗಲ್, ಮೂವತ್ತುಮೂಕೋಟಿ ದೇವಗಣಂಗಳೊಡನೆ ಹರಿಹರವಿ ರಿಂಚಿಗಳಾ ನರಪಾಲಂಗೆ ಪ್ರತ್ಯಕ್ಷರಾಗಿ, "ಏತತ್ಸುಕೃತ ವಿಶೇಷದ ಕತದಿಂ ನಿನ್ನಭೀಷ್ಟಂ ಸಿದ್ಧಿಸುಗೆ!" ಎಂದನುಗ್ರಹಿಸಿದರ್. ಮುನಿ ಗಣಂಗಳಾನಂದಿಸಿ "ಇಂದಲ್ತೆ ಬಾಳ್ವ ಚಂದಂ ಕಾಣಲಾದುದು" ಎಂದು ಹರ್ಷಿಸಿ ಪ್ರೀತಿಪುರಸ್ಸರವಾಗಿ ಪರಸಿದರ್. ಗಾಧಿನಂ ದನಂ ಶಿಷ್ಯಬೃಂದವೋಲಗಿಸಲಾತಾಣಕ್ಕೈತಂದು, ಅಳ್ತಿಮಿಗಲಪ್ಪಿ, ಲೋಕಪಾಲಕಲೋಕದಿಂದಾರಾಯನಂ ಕಾಣಲ್ಕೈತಂದ ಪಾಕಾರಿ ಯಿನವೃತವರ್ಷಮಂ ಸುರಿಸಿ, ಕದನದೊಳ್ ಗತಜೀವಿತರಪ್ಪ ನರ ಪಾಲಸೈನಿಕರನುಜ್ಜೀವಿತರನೆಸಗಿ ತಕ್ಕೈಸಿದಂ. ಬಳಿಕಾಧರಾವರಂ ಹರಿಹರಸರಸಿಜಾಸನಾದಿ ದೇವತಾಧಿಪತಿಗಳ ಮೇಣ್ ವಿಶ್ವಾಮಿತ್ರ ಪ್ರಮುಖ ಮುನಿಮುಖ್ಯರ ಅನುಗ್ರಹದ ಬಲ್ಪಿಂ ಮಹಾ ತೇಜ ಸ್ವಿಯಾಗಿ, ಚತುರಂಗ ಬಳಂಗಳ್ ಬಳಸುತ್ತೈತರಲ್ ಸುನಾಸೀರ ವೈಭವದೊಳ್ ನಿಜನಗರಿಗೈತಂದು, ಸಮುಚಿತಸುಮುಹೂರ್ತದೊ ಳ್ ಪುರಪ್ರವೇಶಮಂ ಗೆಯ್ದು, ಕಲಕಂಧರೆಯುಂ ಕೂಡಿ ಇಷ್ಟವಿ ನೋದಂಗಳೊಳ್ ನೆಲಸಿರ್ದಂ. ಅದು ಕಾರಣದಿಂದೀಭೂವರಂ ಮುನ್ನಿನ ಜನ್ಮದೊಳಾಂತ ಕೌಶಿಕ ವರಪ್ರಭಾವದಿಂದೀ ಜನ್ಮದೆ ಆ ಮಹರ್ಷಿಯ ಆತ್ಮತಪಃಫಲದೊಳರ್ಧಮಂ ಪಡೆಯಲಾದುದು" ಎಂದು ಪೇಳ್ದ ವಸಿಷ್ಠನಂ ನೋಡಿ ಸುಯಜ್ಞಂ "ಮುನಿವರ, ವರ ಗುಣಮಣಿಯಾದೀ ಲೋಹಿತ್ಯಾಸನಂ ತಕ್ಷಕಾಹಿನಿಜಗರಾಶುಶುಕ್ಷ

ಣೆಯಿಂ ಸೀದುದೇಕೆ?" ಎಂದು ಬೆಸಗೊಳಲಾವಸಿಷ್ಠನಿಂತೆಂದಂ—

"ಮುನ್ನಮೊಂದುದಿನಂ ತಕ್ಷಕಂ ಸಹಸ್ರಾಕ್ಷದರ್ಶನಾಪೇಕ್ಷೆಯಿಂ ದಿವಕ್ಕೆ ಪೋಗಲ್ ತತ್ಸುತನುಂ ಪಿಂದೆ ಬರುತಿರೆ, ಅವನಲಕಾಪುರಪರಿಸರದೊಳ್ ನಿಂದು, ತದ್ವೈಭವ ನಿರೀಕ್ಷಣಾಪೇಕ್ಷೆಯಿಂದಲ್ಲಿಯೆ ಚರಿಸುತೆ, ರಂಭಾಗೃಹಕ್ಕೆ ಪೋಗುತಿರ್ದ ನಲಕೂಬರಂಗೆ ಅಡ್ಡವಾಗಿ ಮಲಗಿರ್ದಂ. ಅದಂ ಕಂಡು ಕೌಬೇರಿ ತೆರದೊಳುರಗನಡ್ಡಂಬರ್ಪುದನರ್ಥಮೂಲಮೆಂದೆಣಿಸಿ, ನಿಜಕರಾಸಿಯಿಂದವನಂ ತರಿದುರುಳ್ಚಿ ಪೋದಂ. ಆ ವೃತ್ತಾಂತಮನಾಗಳೆ ನಾರದನತ್ತಣಿಂ ತಕ್ಷಕನರಿತು, ಅಂತರಂಗದೊಳ್ ಮರುಗುತೆ, ಅಲಕಾಪುರಕ್ಕೆ ಪೋಗಿ, ಅಲ್ಲಿ ಮುರಿದು ಮಡಿದಿರ್ದ ಕುವರನಂ ಕಂಡು ಕಡುಶೋಕಿಸಿ, ಇನಿಸು ಮೆಯ್ಮರೆದು ಎಳ್ಚತ್ತು, ಸಂತಾಪಂ ಮಿಗೆ ಪಲುಂಬಿ 'ಶ್ವಸನನಶನಮಾಗಿ ಬಾಳ್ವ ಪಾವಪಸುಳೆಯಂ ಪಾಪಮೆನ್ನದೆ, ಕರವಾಲದ ಪಾಲ್ಗೊಯ್ದು ಪೋದ ಪಾಪಿ ಮರ್ತ್ಯದೊಳ್ ಮಾನವನಾಗಿ ಜನಿಯಿಸಿ ನಾಂ ಕಡಿಯಲುರವಣಿಸಿ ವಿಷವೇರಿ ಮಡಿಗೆ' ಎಂದು ಶಪಿಸಿ ಅಮರ್ತ್ಯಪತಿಯತ್ತಣಿಂ ತಾಂ ಪಡೆದ ಅಮೃತಸಂಜೀವನ ಮಣಿಪ್ರಭಾವದಿಂ ಕುವರನಂ ಬರ್ದುಂಕಿಸಿ, ನಿಜಲೋಕಮನೆಯ್ದಿದಂ. ನಲಕೂಬರನಾವರ್ತಮಾನಮಂ ಕೇಳ್ದು ಮನದೊಳಳ್ಕುತೆ, ತನ್ನಿನಿಯಳಾದ ರಂಭೆಯ ಕೆಳದಿ ಮೇನಕೆಯ ಇನಿಯನಾ ಕೌಶಿಕನಾಗಿರ್ಪುದಂ ತಿಳಿದು, ಆತಂ ತನ್ನನೋಪನೆಂದೆಣಿಸಿ ಆತನಂ ಸಾರ್ದು, ತನಗೊದವಿದ ಬನ್ನಮಂ ಕಳೆದು ಬಿಡಿಸಲ್ ಬೇಡಲಾ ಮುನೀಂದ್ರನಳ್ತಿಯಿಂ ಪಕ್ಷೀಕರಿಸಿ, "ತಕ್ಷಕಶಾಪದಿಂದೊಗೆವ ಭಯಂ ನಿನಗೆ ದೂರಮಾದಪುದು. ನಿನ್ನಂಶದೊಳೊರ್ವ ಮಾನವಂ ಹರಿಶ್ಚಂದ್ರನೆಂಬ ಮಾನವೇಂದ್ರಂಗೆ ನಂದನನಾಗಿ, ಮರ್ತ್ಯಲೋಕ

ದೊಳುದಯಿಸಿ, ತಕ್ಷಕನಿಂ ದಷ್ಟನಾಗಿಯುಳ್ಳ ಅಂಚಿತಾಚಾರಸಂಪನ್ನರೆನಿಪ ತಾಯ್ತಂದೆಗಳ ಪುಣ್ಯಫಲದೆ ಪುನರ್ಜೀವಿತನಾಗಿ ಚಿರಕಾಲಂ ಧರಾಪರಿಪಾಲನಂ ಗೆಯ್ವಂ. ನೀಂ ಚಿಂತಿಸದೆ ಪೋಗ!" ಎಂದನುಗ್ರಹಿಸಿದಂ. ಆದುಕಾರಣದಿಂದಾಲೋಹಿತಾಸ್ಯಂ ನಲಕೂಬರಾಂಶದೊಳಿಳೆಯೊಳ್ಪುಟ್ಟಿ, ತಕ್ಷಕಾಹಿ ಕಡಿಯಲಳ್ದು ಬಾಳ್ದಂ" ಎಂದು ವಸಿಷ್ಠನೊಕ್ಕಣಿಸಲ್ ಸುಯಜ್ಞಂ "ಈ ಚಕ್ರವರ್ತಿಯುಂ ಕಿಂಕರನಾಗಿ ಕೊಂಡಾಚಂಡಾಲನದಾರ್? ಅವಂ ವಿಶ್ವಾಮಿತ್ರಂಗೆ ಪ್ರಿಯಮನೆಸಗಲೇಕೆ?" ಎಂದು ಬೆಸಗೊಳಲಾ ಮುನಿವರಿಷ್ಠಂ ಮೊಗದೊಳ್ಮುಗುಳ್ನಗೆ ಮೊಳೆಯೆ ಮೇಣಿಂತೆಂದಂ—

"ಈ ಹರಿಶ್ಚಂದ್ರನ ತಾತಂ ತ್ರಿಶಂಕುವೀತನಂ ಪಟ್ಟಭದ್ರನಂಗೆಯ್ದು, ಎನ್ನಾಶ್ರಮಕ್ಕೈತಂದು 'ಗುರುವರ್ಯ, ಸರ್ವೈಶ್ವರ್ಯಂಗಳಂ ತೊರೆದು, ಐಹಿಕಸುಖಂಗಳ್ಗೆ ಬೇಸತ್ತು, ಸಶರೀರನಾಗಿ ಸಗ್ಗಮನಡರಲಿಚ್ಛೈಸಿ ನಿಮ್ಮನಾಶ್ರಯಿಸಿದೆಂ. ಎನ್ನೊಳ್ ಕರುಣಿಸಿ ಈಪ್ಸಿತಮಂ ನೆರವೇರಿಸುವುದು' ಎಂದು ಪ್ರಾರ್ಥಿಸಲ್ ನಾನದಕ್ಕೊಡಂಬಡದೆ ನಿಷೇಧಿಸಲವಂ ಮುಳಿದು 'ಗುರುಗಳೆಂದು ನಿಮ್ಮನಾಶ್ರಯಿಸಿಪುದರತ್ತಣಿಂ ಆಶ್ರಿತೋದ್ಧರಣ ಪರಾಯಣನಾದ ವಿಶ್ವಾಮಿತ್ರನನಾಶ್ರಯಿಪುದು ಲೇಸು, ಎಂದೆನ್ನನಸಡ್ಡೆಗೆಯ್ದಂ. ನಾನದರ್ಕೆ ಮುನಿದು 'ತಾಣಮನರಿಯದೆ ತರಮಲ್ಲದ ನುಡಿಯಂ ನುಡಿದೈ, ಅದರಿಂ ನೀಂ ಚಂಡಾಲನಾಗ!' ಎಂದು ಶಪಿಸಿದೆಂ. ಬಳಿಕಮಾಭೂಪಾಲಂ ಪೊಲೆತನಂ ತನಗೊದವಲ್ ಕೌಶಿಕನಾಶ್ರಮಕ್ಕೆ ಪೋಗಿ, 'ಮುನಿಪ್ರವರ, ಆಂ ತ್ರಿಶಂಕು, ವಸಿಷ್ಠಶಾಪದಿಂದೆನಗೀ ಪೊಲೆತನವೊದವಿರ್ಪುದು. ಎನ್ನಂ ಕರುಣಿಸಿ ಸಗ್ಗಕಡರ್ವ ತೆರನನುಪದೇಶಂಗೆಯ್ಯಲಾಗದೆ?' ಎಂದಾರುತೆ, ತನ್ನ ವೃತ್ತಾಂತಮನೆಲ್ಲಮನಾದ್ಯಂತಮಾಗರಿಪಿದಂ.

ೀಯನಾಬಿನ್ನಪಮಂ ಕೈಕೊಂಡು, ನಿನ್ನಂ ಚಂಡಾಲನಂ ಮಾಳ್ದ
ಗುರುವಹುದಹುದೆನೆ ನಿನ್ನನೀ ಮೆಯ್ಯೊಳೆ ದಿವಕ್ಕೆ ಕಳುಹುವೆಂ.
ೀಗ!' ಎಂದು ದಿವ್ಯಮಂತ್ರಮನೊಂದನುಪದೇಶಮನೀಯಲಾ
ಮಂತ್ರಮಹಿಮೆಯಿಂ ತ್ರಿಶಂಕು ನಿಶ್ಶಂಕನಾಗಿ ಬಾಂದಳಮನೆಯ್ದಿ,
ಸಗ್ಗಮಂ ಪುಗುತಿರಲತ್ತಲಮರಪತಿಯನೋಲಗಿಸಲ್‌ಬಂದಿರ್ದ
ಶಮನಂ, 'ಇವನಾವನೀಪೊಲೆಯಂ? ನಿರ್ಭಯದಿಂದಮರಾಲಯ
ಮಂ ಪುಗುವಂ!' ಎನುತೆ ನಿಜಭಟಾಳಿಯಿಂದವನನಧೋಮುಖ
ನಾಗಿ ಬೀಳ್ವಂತೆ ನೂಂಕಿಸಿದಂ. ಆಗಳಾತ್ರಿಶಂಕುವಧಃಪತಿತನಾಗು
ತ್ತೆ, 'ಗಾಧೇಯಾ! ದಯಾವಿಧೇಯಾ! ನಿನ್ನಾಣತಿಯಂ ಕೈಕೊಳದೆ
ವನೆನ್ನಂ ನೂಂಕಿದಂ. ಇದರ್ಕೆ ಪ್ರತೀಕಾರಮನಾರಯ್ದು, ಎನ್ನಂ
ರೆಯಲಾಗದೇ?' ಎಂದು ಮೊರೆಯಿಡಲ್ತೊಡಗಿದಂ. ಆ ಆರ್ತ
ಮಂ ಕೌಶಿಕನಾಲಿಸಿ, ಆಗ್ರಹೋದಗ್ರನಾಗಿ ತಪಮನುಳಿದು,
ಜಪಮಾಲೆಯಂ ನೆಲಕ್ಕೆ ಬಿಸುಟು, ವೇಣುದಂಡದೊಡನೆ
ಂಡಮನೆತ್ತಿ, 'ನೃಪಾಲಾ ನೀನಲ್ಲಿಯೆ ನಿಲ್! ನಿಲ್!
ಬೀಳದಿರಾ! ತಲೆಕೆಳಗಾಗಿಯಾದೊಡೆಮಲ್ಲಿಯೇ ನಿಲ್.
ರ್ಣಡೆಯೊಳಲ್ಲದೆ ಪೆರತೊಂದೆಡೆಯೊಳ್ ಸಗ್ಗಮತ್ತಣದು!'
ತೆ ನಿಜತಪಃಪ್ರಭಾವದಿಂ ಸ್ವರ್ಗಲೋಕವಾಸ್ತವ್ಯರನಾಕರ್ಷಿ
ಲ್ ಬ್ರಹ್ಮಾಂಡಂ ಕಂಪಿಸೆ, ಬ್ರಹ್ಮನಾಬ್ರಹ್ಮಣ್ಯನಂ ಕಾಣಲೈತಂದು,
ಆಗಳಾಕೃಷ್ಟರಾದ ದೇವತೆಗಳುಂ, ಕೆಲ ಗ್ರಹನಕ್ಷತ್ರಂಗಳುಮಾ
ಮಹೀಕಳತ್ರನಂ ಪರಿವೇಷ್ಟಿಸಿ ನಿಲೆಯುಂ, ಅವನಿರ್ಪ ತಾಣಮು
ತ್ರಿಶಂಕುಸ್ವರ್ಗಮೆನೆ ನೆಗಳಲುಮನುಗ್ರಹಿಸಿ, ಆ ಸಂಯಮಿಯು
ಆಗ್ರಹಮನಳಿಯಿಸಿ ತೆರಳ್ದಂ. ಅಂದಿನಿಂ ಕೌಶಿಕಮಹಿಮಾಪ್ರದ
ರ್ಶಕನಾಗಿ ತ್ರಿಶಂಕು ಬಾಂದಳದೊಳೆ ತಲೆಕೆಳಗಾಗಿ ನೇಲುತ್ತಿರ್ಪನಿ.

ಕುಶಿಕನಂದನನನಿತರಿಂ ತಣಿಯದೆ ದಂಡಧರನ ಅಪರಾಧಕ್ಕೆ ಸಮು ಮೆನಿಸಿ, ಇಳೆಯೊಳ್ ಚಂಡಾಲಯೋನಿಯೊಳ್ ಪುಟ್ಟುವುದೆಂದು ಶಪಿಸಲವಂ ಪಾದಾಕ್ರಾಂತನಾಗಲ್ ತನಗೆ ಪ್ರಿಯಮನೆಸಗಿ ಶಾಪ ವಿಮುಕ್ತನಾಗುವುದೆಂದನುಗ್ರಹಿಸಿದಂ. ಅದರಿಂದಂತಕನಂತ್ಯಜನಾ ಗಿ, ವೀರಸೇನನೆಂಬವಂಗೆ ಸುತನಾಗಿ, ವೀರಬಾಹ್ವಾಹ್ವಯದಿನು ದಯಿಸಿ, ಹರಿಶ್ಚಂದ್ರನಂ ತೊಳ್ತಾಗಿ ಕೊಂಡು, ವಿಶ್ವಾಮಿತ್ರಂಗೆ ಹಿತ ಮನನುಗೊಳಿಸಿ ಶಾಪವಿಮುಕ್ತನಾದಂ" ಎನಲಾಲಿಸಿ, ಸುಯಜ್ಞಂ "ಸರ್ವಜ್ಞ, ಅಂತಾದೊಡೆ ಕಾಲಕೌಶಿಕನದಾರ್? ಆವಂ ಚಂದ್ರಮ ತಿಯನಂತು ಕಾಡಿ ಕೌಶಿಕಂಗೆ ಪ್ರಿಯಮನೆಸಗಲೇಕೆ?" ಎಂದು ಬೆಸಗೊಳಲಾ ಮುನಿವರನಿಂತುಸಿರಿದಂ.

"ಮುನ್ನಂ ಲೋಕಮಿತ್ರನಾದ ಜಲಜಮಿತ್ರಂ ತ್ವಷ್ಟೃಪುತ್ರಿ ಸಂಜ್ಞೆಯೆಂಬವಳಂ ಪರಿಣಯಮಾಗಿ, ಅವಳಿಂ ಮನುದಂಡಧರ ರೆಂಬ ಇರ್ವರಂ ಕುವರರಂ ಪಡೆದು, ಸುಖದಿಂದಿರೆ, ಸಂಜ್ಞೆಯೊಂದು ದಿನಂ ತವರ್ಗೆ ಪೋಗಲಿಚ್ಛೈಸಿ, ತನ್ನ ಛಾಯೆಯೊಳೆ ಛಾಯೆಯುಂ ಬೋರ್ವ ಸುಂದರಿಯಂ ನಿರ್ಮಿಸಿ, ಪತಿಸುತರಂ ಪೊರೆಯಲ್ಬೆಸಸಿ, ಇನಿಯುಂಗರಿಪದೆಯೆ ತೆರಳ್ದಳ್. ಇತ್ತಲಾಛಾಯೆ ತಾನಿತರಳೆನುತ ತರಣಿಯರಿಯದಂತೆಸೆಯುತೆ, ಅಚಿರಕಾಲದೊಳೆ ಸೌವರ್ಣಿಶನೈಶ್ಚರ ರೆಂಬಿರ್ವರಂ ತನಯರಂ ಪಡೆದು, ಕೂರ್ಮೆಯುಳಿದು ಸಂಜ್ಞೆಯ ಕುವರರನಸಡ್ಡೆಯಾಗಿ ಕಾಣುತಿರಲದನೊಲ್ಲದೆ ಜ... ಶನೈಶ್ಚರನ ಕಾಲ್ಮುರಿದೊಯ್ದಂ. ಅದನಿನನರಿತು ಛಾಯೆಯೊಳ್ಮುಳಿದು, ಸಂಜ್ಞೆಯ ಪೋಗಂ ತಿಳಿದು ತುರಗಿಯ ರೂಪದೊಳಿಳೆಯೊಳ್ ಕುರುಕ್ಷೇತ್ರದ ನಾಂತರದೊಳ್ ಚರಿಸುತಿರ್ದ ಮನದನ್ನಳ... ತುರಗ... ...ಡಿ ಅಶ್ವಿನಿಗಳೆಂಬವಳಿಕುವರರಂ ಪಡೆದು, ನಿಜರೂಪಮಂ ತೋರಿದ